# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ



ದೇವರ ನಂಬುಗೆ ಎಂಬುದು ಹೇಳುವುದು ಸುಲಭ. ವಿಶ್ಲೇಷಿಸಿ ನೋಡುವಾಗ ವಿಚಿತ್ರಸಂಗತಿಗಳು ಬಯಲಾಗುತ್ತವೆ. ನಿಜಕ್ಕೂ ದೇವರ ನಂಬುಗೆ ಇಲ್ಲದೆ, ಇರುವಂತೆ ತೋರಿಸುವವರು ಕೂಡಾ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ದೇವರನ್ನು ನಂಬಿ ಕುಳಿತು ಕೊಳ್ಳಲಾರರು. ಅವರು ತಮ್ಮ ಶಕ್ತಿಯನ್ನೂ, ತಮ್ಮಂತಹ ಇತರರ ಶಕ್ತಿಯನ್ನೂ ಬಹಳಮಟ್ಟಿಗೆ ಆಧಾರಪಡಿಸಿಕೊಳ್ಳುತ್ತಾರೆ. ದೇವರು ಜಮೀನುಗಳನ್ನು ಗೇಣಿಗೆ ತೆಗೆದುಕೊಳ್ಳುವುದಿಲ್ಲ. ಫ್ಯಾಕ್ಟರಿಗಳನ್ನು ನಡೆಸುವುದಿಲ್ಲ. ಬಡಗಿಯಾಗನು, ಕಮ್ಮಾರನಾಗನು. ಆದುದರಿಂದ ಕಾರ್ಯಕಾರಣಗಳ ಅನುಭವವಿದ್ದವನು ಮಾನವರಲ್ಲಿಯೇ ದೇವರನ್ನು ನೋಡಬಲ್ಲವನಾಗುತ್ತಾನೆ. ಅದು ಕೂಡಾ ಅದರಿಂದ ತನಗೆ ಲಾಭವಾದಾಗಲೇ. ಇದನ್ನು ನಿರೂಪಿಸುವಂತಿದೆ ಈ ಸಂಚಿಕೆಯ "ನಾಸ್ತಿಕನ ದೈವಭಕ್ತಿ" ಎಂಬ ಬೇತಾಳ ಕಥೆ.

ಸಂಪುಟ : ೭೦ ಏಪ್ರಿಲ್ '೭೮ ಸಂಚಿಕೆ : ೪

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦









ಸಂಶ್ರುತ್ಯ ಚ ಪಿತುರ್ವಾಕ್ಯಂ
ಮಾತುರ್ವಾ ಬ್ರಾಹ್ಮಣಸ್ಯ ವಾ
ನ ಕರ್ತವ್ಯಂ ವೃಥಾ (ವೀರ)
ಧರ್ಮಮಾಶ್ರಿತ್ಯ ತಿಷ್ಠತಾ        ೧.

ತಂದೆಯ ಮಾತು, ತಾಯಿಯ ಮಾತು, ಬ್ರಾಹ್ಮಣನ ಮಾತುಗಳನ್ನು ನಡೆಸುವುದರಲ್ಲಿ ಧರ್ಮವನ್ನನು ಸರಿಸುವವನು ತಪ್ಪಬಾರದು.

ಗುರುಶ್ಚ ರಾಜಾ ಚ ಪಿತಾ ಚ ವೃದ್ಧಃ
ಕ್ರೋಧಾತ್ಪ್ರಹರ್ಷಾದ್ಯದಿವಾಪಿ ಕಾಮಾತ್
ಯದ್ವ್ಯಾದಿಶೇತ್ಕಾರ್ಯಮಪೇಕ್ಷ್ಯ ಧರ್ಮಂ
ಕಸ್ತನ್ನಕುರ್ಯಾ ದನೃಶಂಸ ವೃತ್ತಿಃ        ೨.

ಗುರುವೋ, ರಾಜನೋ, ತಂದೆಯೋ, ವೃದ್ಧನೋ ಕೋಪದಿಂದಲೋ ಅಧಿಕ ಸಂತೋಷದಿಂದಲೋ ಕಾಮಪ್ರೇರಣೆಯಿಂದಲೋ ಆಜ್ಞೆಮಾಡಿದಾಗ ಆ ಕೆಲಸ ಮಾಡದವನು ಪಾಪಿಷ್ಠನೇ.

ನ ಸತ್ಯಂ ದಾನಮಾನೇ ವಾ
ನ ಯಜ್ಞಾಶ್ಚಾಪ್ತ ದಕ್ಷಿಣಾಃ
ತಥಾ ಬಲಕರಾ (ಸ್ಸೀತೇ)
ಯಥಾ ಸೇವಾ ಪಿತುರ್ಹಿತಾ        ೩.

ತಂದೆಗೆ ಇಷ್ಟವನ್ನುಂಟುಮಾಡಿದರೆ ಬರುವ ಬಲವು, ಸತ್ಯದಿಂದ, ದಾನದಿಂದ, ದಕ್ಷಿಣೆಗಳಿಂದ ಕೂಡಿದ ಯಜ್ಞಗಳಿಂದ ಬರುವ ಬಲಕ್ಕಿಂತ ಹೆಚ್ಚಿನದು.



ಪಿತೃ ವಾಕ್ಯ—೨




# ಕಾಕೋಲೂಕೀಯ

೫೨

ರಕ್ತಾಕ್ಷಿ ಗೂಗೆ ಬಡಗಿಯ ಕಥೆಯನ್ನು ಹೇಳಿ ಮುಗಿಸಿದ ಮೇಲೆ, "ಮಿತ್ರರೇ, ಈ ಕಾಗೆಯ ಠಕ್ಕು ಮಾತನ್ನು ಕೇಳಿ ಮೋಸ ಹೋಗಬೇಡಿರಿ. ಇದು ಜನ್ಮತಃ ಕಾಗೆಯಾದುದರಿಂದ ಯಾವಾಗಲೂ ನಮ್ಮ ಶತ್ರುವೇ ಎಂಬುದನ್ನು ಗಟ್ಟಿಯಾಗಿ ತಿಳಿಯಿರಿ. ನಿಮ್ಮಂತಹ ಬುದ್ಧಿವಂತರಿಗೆ ಹೆಚ್ಚು ಹೇಳಬೇಕಾಗಿರದು" ಎಂದಿತು.

ಅಷ್ಟು ಹೇಳಿದರೂ ಉಳಿದ ಗೂಗೆಗಳು ಅದರ ಬುದ್ಧಿಯನ್ನು ಲಕ್ಷ್ಯಮಾಡದೆ, ಸ್ಥಿರಜೀವಿ ಕಾಗೆಯನ್ನು ಒಂದು ಡೋಲಿಯಲ್ಲಿ ಹಾಕಿಕೊಂಡು ತಮ್ಮ ಪರ್ವತ ದುರ್ಗಕ್ಕೆ ಹೊತ್ತುಕೊಂಡು ಹೋದುವು.

ಅಲ್ಲಿ ಸ್ಥಿರಜೀವಿ ಕಾಗೆ ಗೂಗೆ ರಾಜನೊಂದಿಗೆ, "ಓ ರಾಜಾ! ನೀನು ನನ್ನ ಮೇಲೆ ಇಷ್ಟೊಂದು ದಯೆ ಏತಕ್ಕೆ ತೋರಿಸುವೆ? ಒಂದು ಕಾಲದಲ್ಲಿ ನಾನು ನಿಮಗೆ ಶತ್ರುವಾಗಿದ್ದುದಕ್ಕೆ ತುಂಬಾ ನಾಚಿಕೊಂಡಿದ್ದೇನೆ. ದಯಮಾಡಿ ಅಗ್ನಿ ಹೊತ್ತಿಸಿರಿ. ನನ್ನ ಜೀವಿತವು ನಿರರ್ಥಕವಾದುದಕ್ಕಾಗಿ ಅದನ್ನು ಅಂತ್ಯಗೊಳಿಸಿಬಿಡುತ್ತೇನೆ" ಎಂದು ಹೇಳಿತು.

ರಾಜನಿಗೂ ಆತನ ನಾಲ್ಕು ಮಂತ್ರಿ ಗೂಗೆಗಳಿಗೂ ಕಾಗೆಯ ಮಾತು ಬಹಳನಾಟಿತು. "ಅಯ್ಯಾ, ತಾವು ಅಗ್ನಿಗೆ ಆಹುತಿಯಾಗಬೇಕಾದ ಅಗತ್ಯವೇನು ಬಂತು?" ಎಂದು ಅವುಗಳು ಕೇಳಿದುವು.

"ಹಾಗೆ ಮಾಡಿದರೆ ಮತ್ತೆ ಗೂಗೆಯಾಗಿ ಹುಟ್ಟಿಬಿಡುತ್ತೇನೆ. ಆಮೇಲೆ ಎಂದಿಗೂ ಕಾಗೆ ಜನ್ಮ ಎತ್ತಲಾರೆ" ಎಂದಿತು ಸ್ಥಿರಜೀವಿ.

ಆ ಕಾಗೆಯ ಮಾತಿನ ಧೋರಣೆ ರಕ್ತಾಕ್ಷಿ ಗೂಗೆಗೆ ಹಿಡಿಸಲಿಲ್ಲ. "ನೀನು ಗೂಗೆಯಾಗಿ ಹುಟ್ಟಿದರೂ ಕಾಗೆಗಳ ಪಕ್ಷವಾಗಿಯೇ ಇರುವೆ. ಹಿಂದೆ ಒಂದು ಇಲಿಕನ್ಯೆ ಕಡೆಗೆ ಇಲಿಯೇ ಆದ ಹಾಗೆ!" ಎಂದಿತು ರಕ್ತಾಕ್ಷಿ. "ಅದೇನು ಕಥೆಯೋ?" ಎಂದು ಸ್ಥಿರಜೀವಿ ಕೇಳಲು ರಕ್ತಾಕ್ಷಿ ಗೂಗೆ ಆ ಕಥೆಯನ್ನು ಹೀಗೆ ಹೇಳಿತು:

ಹಿಮಾಲಯ ಪರ್ವತದಲ್ಲಿ ಹುಟ್ಟಿ ಹಾರುತ್ತ ಧುಮುಕುತ್ತ, ನೊರೆಗಳನ್ನುಗುಳುತ್ತ ಪ್ರವಹಿಸುವ ಗಂಗಾನದಿಯ ತೀರದಲ್ಲಿ ಒಂದು ಆಶ್ರಮವಿದ್ದಿತು. ಆ ಸ್ಥಳದಲ್ಲಿ ಅನೇಕ [illegible] ಋಷಿಗಳು ತಪಸು





ಮಾಡಿಕೊಂಡಿದ್ದರು. ಯಾಜ್ಞವಲ್ಕ್ಯನೆಂಬ ಋಷಿ ಎಲ್ಲರಿಗೂ ಹಿರಿಯನಾಗಿದ್ದನು.

ಒಂದು ದಿನ ಯಾಜ್ಞವಲ್ಕ್ಯನು ನದಿಯಲ್ಲಿ ಸ್ನಾನ ಮಾಡಿ, ಅಲ್ಲಿಂದ ಹಿಂದಿರುಗುವಾಗ ಒಂದು ಹದ್ದು ಒಂದು ಹೆಣ್ಣು ಇಲಿಮರಿಯನ್ನು ಅವನ ಮೇಲೆ ಹಾಕಿಬಿಟ್ಟಿತು. ದಯಾವಂತನಾದ ಆ ಋಷಿ ಆ ಇಲಿ ಮರಿಯನ್ನು ತನ್ನ ತಪಃ ಶಕ್ತಿಯಿಂದ ಮನುಷ್ಯ ಹುಡುಗಿಯನ್ನಾಗಿ ಬದಲಾಯಿಸಿ, ಆಶ್ರಮಕ್ಕೆ ಕರೆದು ಕೊಂಡು ಹೋಗಿ, ಮಕ್ಕಳಿಲ್ಲದ ತನ್ನ ಹೆಂಡತಿ ಯೊಂದಿಗೆ, "ಇಕೋ, ಈ ಹುಡುಗಿಯನ್ನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದವಳ ಹಾಗೇ ಭಾವಿಸಿ ಶ್ರದ್ಧೆ ಯಿಂದ ಬೆಳೆಯಿಸು." ಎಂದು ಹೇಳಿದನು.

ಅವಳು ಸಂತೋಷಪಟ್ಟು ಅದೇ ವಿಧವಾಗಿ ಪ್ರೀತಿ ಯಿಂದ, ಶ್ರದ್ಧೆಯಿಟ್ಟು ಬೆಳೆಸಿ ದೊಡ್ಡವಳನ್ನಾಗಿ ಮಾಡಿದಳು. ಹುಡುಗಿಗೆ ಹನ್ನೆರಡು ವರ್ಷಗಳು ತುಂಬಿದುವು.

ಆಗ ಯಾಜ್ಞವಲ್ಕ್ಯನೊಂದಿಗೆ ಅವನ ಹೆಂಡತಿ, "ಸ್ವಾಮಿ, ಇನ್ನೂ ತಾತ್ಸಾರ ಮಾಡುವಿರೇಕೆ? ನಿಮ್ಮ ಕುಮಾರಿಗೆ ತಕ್ಕ ವಯಸ್ಸು ಬಂತು. ಬೇಗನೆ ಮದುವೆ ಮಾಡಬೇಕು" ಎಂದಳು.

"ಹೌದು. ನೀನು ಹೇಳುವುದು ನಿಜ. ಶಾಸ್ತ್ರ ಪ್ರಕಾರ ಹುಡುಗಿಗೆ ವಿವಾಹದ ವಯಸ್ಸು ಬಂದಿದೆ. ಅವಳು ಎಲ್ಲಾ ವಿದ್ಯೆಗಳಲ್ಲೂ ತೇರ್ಗಡೆಯಾಗಿದ್ದಾಳೆ. ಒಳ್ಳೆಯ ಸಂಗೀತ ಹಾಡುತ್ತಾಳೆ. ತುಂಬಾ ಓದಿ ಕೊಂಡಿದ್ದಾಳೆ. ಅವಳಿಗೆ ತಕ್ಕ ವರನನ್ನೇ ನೋಡ ಬೇಕು. ಆದುದರಿಂದ ಹುಡುಗಿಗೆ ಇಷ್ಟವಿರುವ ಪಕ್ಷ ದಲ್ಲಿ ಸೂರ್ಯನನ್ನೇ ಆಹ್ವಾನಿಸಿ ಅವನಿಗೇ ಕೊಟ್ಟು ಮದುವೆ ಮಾಡುತ್ತೇನೆ" ಎಂದನು ಯಾಜ್ಞವಲ್ಕ್ಯ.

"ಬಹಳ ಒಳ್ಳೆಯದು. ಹಾಗೇ ಮಾಡಿ" ಎಂದಳು ಹೆಂಡತಿ. ಮಹರ್ಷಿ ಸೂರ್ಯನನ್ನು, ತನ್ನ ಆಶ್ರಮಕ್ಕೆ ಆಹ್ವಾನಿಸಿದನು. ಸೂರ್ಯನು ಬಂದು, "ಮಹಾತ್ಮಾ, ಏಕೆ ನನ್ನನ್ನು ಕರೆದಿರಿ?" ಎಂದು ಕೇಳಿದನು.

ಯಾಜ್ಞವಲ್ಕ್ಯನು, "ಇಗೋ, ಇವಳು ನನ್ನ ಕುಮಾರಿ. ದಯಮಾಡಿ ಇವಳನ್ನು ವಿವಾಹ ಮಾಡಿಕೊ" ಎಂದು ಹೇಳಿ, ಕುಮಾರಿಯ ಕಡೆಗೆ ತಿರುಗಿ, "ಅಮ್ಮಾ, ಮೂರು ಲೋಕಗಳನ್ನೂ ಪ್ರಕಾಶಿಸುವಂತಹ ಈ ಸೂರ್ಯದೇವನನ್ನು ಮದುವೆ ಯಾಗುವುದರಲ್ಲಿ ನಿನ್ನ ಅಭಿಪ್ರಾಯವೇನು?" ಎಂದು ಕೇಳಿದನು.

"ಈತ ತುಂಬಾ ಬೆಚ್ಚಗಿದ್ದಾನೆ. ಇವನಿಗಿಂತ ದೊಡ್ಡ ಸಂಬಂಧವಿದ್ದರೆ ನೋಡಿರಿ" ಎಂದಳು ಹುಡುಗಿ.

ಋಷಿ ಸೂರ್ಯನನ್ನು ನೋಡಿ, "ನಿನಗಿಂತ ದೊಡ್ಡವರು ಯಾರು?" ಎಂದು ಕೇಳಿದನು.

"ನನಗಿಂತ ಮೋಡವು ದೊಡ್ಡದು. ಅದು ನನ್ನನ್ನು ಪೂರ್ತಿ ಮುಚ್ಚಿ ಹಾಕಿ, ನನ್ನ ಜಾಡು

ಯಾರಿಗೂ ತಿಳಿಯದಂತೆ ಮಾಡಿಬಿಡುತ್ತದೆ" ಎಂದನು ಸೂರ್ಯ. ಋಷಿ ಸೂರ್ಯನನ್ನು ಕಳುಹಿಸಿ, ಮೋಡವನ್ನು ಕರೆದು, ತನ್ನ ಕುಮಾರಿಗೆ ತೋರಿಸುತ್ತ, "ಅಮ್ಮಾ, ನಿನ್ನನ್ನು ಈ ಶಕ್ತಿವಂತನಿಗೆ ಕೊಟ್ಟು ಮದುವೆ ಮಾಡಲೇ ?" ಎಂದು ಕೇಳಿದನು.

"ಇವನು ಕಪ್ಪಗೆ ತೇವವಾಗಿದ್ದಾನೆ. ಇವನಿಗಿಂತ ದೊಡ್ಡವನಿದ್ದಾನೋ ಅಂತ ಕೇಳಿ ತಿಳಿದು, ನನ್ನನ್ನು ಅವನಿಗೆ ಕೊಟ್ಟು ಮದುವೆ ಮಾಡಿ" ಎಂದಳು.

"ನಿನಗಿಂತಲೂ ದೊಡ್ಡವರಾರಾದರೂ ಇದ್ದಾರೆಯೆ ?" ಎಂದು ಋಷಿ ಮೋಡವನ್ನು ಕೇಳಿದನು.

"ಇದ್ದಾರೆ. ಗಾಳಿರಾಯ ನನಗಿಂತಲೂ ದೊಡ್ಡವನು. ಆತ ನನ್ನನ್ನು ಆಗಾಗ ಆಚೆಗೂ ಈಚೆಗೂ ದೂಡುತ್ತಾ ಇರುತ್ತಾನೆ" ಎಂದನು ಮೋಡ.

ತರುವಾಯ ಋಷಿ ಗಾಳಿಯನ್ನು ಕರೆಯಿಸಿ ತನ್ನ ಮಗಳೊಂದಿಗೆ, "ನಿನ್ನನ್ನು ಇವನಿಗೆ ಕೊಟ್ಟು ಮದುವೆ ಮಾಡಲೇ ?" ಎಂದು ಕೇಳಿದನು.

"ಅಪ್ಪಾ, ಇವನು ತುಂಬ ಚಂಚಲನಾಗಿದ್ದಾನೆ. ಆಧಾರವಾಗಿ ಹಿಡಿಯಲು ಸಿಗುವವನೇ ಅಲ್ಲ. ಇವನಿಗಿಂತ ಹೆಚ್ಚು ಬಲವಂತನನ್ನು ನೋಡಿ" ಎಂದಳು ಆ ಹುಡುಗಿ.

"ನಿನಗಿಂತ ದೊಡ್ಡವರು ಯಾರಿದ್ದಾರಯ್ಯಾ ?" ಎಂದು ಋಷಿ ಗಾಳಿಯನ್ನು ಕೇಳಿದನು.

"ಪರ್ವತವು ನನಗಿಂತ ತುಂಬಾ ಬಲವಾದುದು. ಅದನ್ನು ಕದಲಿಸಲಿಕ್ಕೂ ನನಗೆ ಸಾಧ್ಯವಿಲ್ಲ" ಎಂದನು ಗಾಳಿರಾಯ.

ಆದುದರಿಂದ ಋಷಿ ಪರ್ವತನನ್ನು ಕರೆಯಿಸಿ, "ನಿನ್ನನ್ನು ಇವನಿಗೆ ಕೊಟ್ಟು ಮದುವೆ ಮಾಡಲೇ ನಮ್ಮಾ ?" ಎಂದು ಮಗಳನ್ನು ಕೇಳಿದನು.

"ಅಪ್ಪಾ ! ಇವನ ಒಳಗೆಲ್ಲಾ ಬರೀ ಪಾಷಣ. ನನ್ನ ಸೌಂದರ್ಯಕ್ಕೆ ಇವನಲ್ಲಿ ಯಾವ ಚಲನೆಯೂ ಬಾರದು. ನನ್ನನ್ನು ಇವನಿಗಿಂತ ಹೆಚ್ಚಿನವನಿಗೇ ಕೊಡಿರಿ" ಎಂದಳು ಮಗಳು.

"ನಿನಗಿಂತ ಹೆಚ್ಚಿನವನಾರಿದ್ದಾರೆ ?" ಎಂದು ಋಷಿ ಪರ್ವತನನ್ನು ಕೇಳಿದನು.

"ನನ್ನಲ್ಲಿ ಬಿಲಗಳನ್ನು ಕೊರೆಯುವ ಇಲಿ ನನಗಿಂತಲೂ ಬಲಿಷ್ಠವಾದುದು." ಎಂದಿತು ಪರ್ವತ.

ಋಷಿ ಇಲಿಯನ್ನು ಕರೆದು, "ಏನಮ್ಮಾ, ಇವನನ್ನು ಮಾಡಿಕೊಳ್ಳುವೆಯಾ ?" ಎಂದು ಮಗಳನ್ನು ಕೇಳಿದನು.

ಅವಳಲ್ಲಿ ಸ್ವಜಾತಿಯ ಅಭಿಮಾನ ಉಕ್ಕಿಬಂದಿತು. ಅವಳು ನಾಚಿಕೆಯಿಂದ, "ಅಪ್ಪಾ, ನನ್ನನ್ನು ಇಲಿಯಾಗಿ ಬದಲಾಯಿಸಿ ಇವನಿಗೇ ಕೊಟ್ಟು ಮದುವೆ ಮಾಡಿಬಿಡಿ" ಎಂದಳು. ಕೂಡಲೇ ಋಷಿ ಹಾಗೇ ಮಾಡಿ ಕರ್ತವ್ಯ ನೆರವೇರಿಸಿದನು.



## ೧೯೫. ಪೇಟೆಗಳ ನಡುವೆ ಲಿಫ್ಟ್!

ಈ ಚಿತ್ರದಲ್ಲಿರುವ ಲಿಫ್ಟಿನಲ್ಲಿ ಏರಿದವರು ಎಲ್ಲಿಗೆ ಹೋಗುತ್ತಾರೆ? ಪೋರ್ಚುಗಲ್ಲಿನ ಲಿಸ್ಬನ್‌ನಲ್ಲಿಯ ಇನ್ನೊಂದು ಪೇಟೆಗೆ ಹೋಗುತ್ತಾರೆ. ಲಿಸ್ಬನ್ ನಗರದಲ್ಲಿ ವಿವಿಧ ಪ್ರಾಂತಗಳ ನಡುವೆ ಕೆಲವು "ಅಂತಸ್ತು" ಗಳಲ್ಲಿ ವ್ಯತ್ಯಾಸವಿದೆ. ಪಾರೀಸಿನಲ್ಲಿ "ಐಫಲ್" ಟವರ್ ನಿರ್ಮಿಸಿದವನೇ ಈ ಲಿಫ್ಟ್ ನಿರ್ಮಿಸಿದನು.





# ನಾಸ್ತಿಕನದೈವಭಕ್ತಿ

ಸಹನೆಯ ಶಿಲೆಯಂತಿರುವ ರಾಜಾ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹಿಂದಿರುಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಆ ಶವದೊಳಗೆ ಸೇರಿಕೊಂಡಿರುವ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ಒಬ್ಬ ಮನುಷ್ಯನು ಒಂದೋ ಆಸ್ತಿಕನಾಗಿರಬೇಕು, ಅಥವಾ ನಾಸ್ತಿಕನಾಗಿರಬೇಕು. ಆದರೆ ಎರಡೂ ಒಬ್ಬನೇ ಆಗಿರುವ ಒಬ್ಬ ವಿಚಿತ್ರ ಮನುಷ್ಯನ ಕಥೆ ನೆನಪಾಗುತ್ತಿದೆ. ದಾರಿಯ ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ" ಎಂದು ಕಥೆಯನ್ನು ಹೇಳಲು ಪ್ರಾರಂಭ ಮಾಡಿತು:

ಒಂದಾನೊಂದು ನಗರದಲ್ಲಿ ರಾಮಣ್ಣನೆಂಬ ಆಸ್ತಿವಂತನೊಬ್ಬನಿದ್ದನು. ಅವನು ಕಷ್ಟನಷ್ಟಗಳಲ್ಲಿ ಬಿದ್ದವರಿಗೂ, ಬಡಬಗ್ಗರಿಗೂ ಸಹಾಯ ಮಾಡುವವನಾಗಿ ಒಳ್ಳೆಯ ಹೆಸರನ್ನು ಸಂಪಾದಿಸಿಕೊಂಡಿದ್ದನು. ಆದರೆ ಅವನು ದೇವರ ನಂಬುಗೆ ಇಲ್ಲದ ಪರಮ ನಾಸ್ತಿಕ. ಇತರರಿಗೆ ಕೈಲಾದ ಸಹಾಯ ಮಾಡುವುದ

## ಬೇತಾಳಕಥೆಗಳು

ಗಳು ಅನೇಕ ಮ
ಅಷ್ಟರಲ್ಲಿ ಸ
ಏನೋ -



ರಲ್ಲೇ ಹುಟ್ಟಿದುದಕ್ಕೆ ಸಾರ್ಥಕವಾದುದೆಂಬ ದೃಢವಾದ ನಂಬುಗೆ ಅವನದು.

ಹಾಗಿರುವಾಗ ರಾಮಣ್ಣನ ಎರಡನೇ ಮಗನಿಗೆ ಏನೋ ಒಂದು ವಿಚಿತ್ರರೋಗವು ಹಿಡಿದುಕೊಂಡಿತು. ಅದರಿಂದ ಅವನ ಮಾತು ಬಿದ್ದುಹೋಯಿತು. ನಗರದೊಳಗಿನ ವೈದ್ಯರಾರಿಗೂ ಆ ರೋಗದ ಗುಟ್ಟು ಗೊತ್ತಾಗಲಿಲ್ಲ. ರಾಮಣ್ಣನ ಬಂಧುಗಳೂ ಮಿತ್ರರೂ ಕೂಡ ಒಂದೇ ರೀತಿಯಾಗಿ, "ನೀವು ನಾಸ್ತಿಕರಾಗಿರುವುದರಿಂದ ದೇವರು ನಿಮ್ಮನ್ನು ಪರೀಕ್ಷೆ ಮಾಡುತ್ತಿದ್ದಾನೆ. ಅಪಚಾರವಾಯಿತೆಂದು ಗಲ್ಲ ಬಡಿದುಕೊಂಡು ದೇವರಿಗೆ ಏನಾದರೂ ಹರಕೆ ಹೇಳಿಕೊಳ್ಳಿ. ನಿಮ್ಮ ಮಗನಿಗೆ ಗುಣವಾಗಬಹುದು" ಎಂದರು.

"ನಿಮ್ಮ ಮಾತಿಗೆ ಅರ್ಥವಿಲ್ಲ. ನಾನು ನಾಸ್ತಿಕನಾದ ಕಾರಣದಿಂದ ದೇವರಿಗಾಗಲೀ ಮನುಷ್ಯರಿಗಾಗಲೀ ಮಾಡಿದ ಅಪಚಾರವಾವುದೂ ಇಲ್ಲ. ತನ್ನ ಯಾವ ಗೋಜಿಗೂ ಬಾರದಿರುವವನನ್ನು ಪೀಡಿಸುವವನು ಎಂತಹ ದೇವರೋ? ನಾನು ಮಾತ್ರ ಯಾವುದಕ್ಕೂ ದೇವರನ್ನು ಬೇಡಲಾರೆ" ಎಂದು ರಾಮಣ್ಣ ಎಲ್ಲರಿಗೂ ಸ್ಪಷ್ಟವಾಗಿ ಹೇಳಿಬಿಟ್ಟನು.

ರಾಮಣ್ಣನ ಹೆಂಡತಿಗೆ ಗಂಡನ ಮೊಂಡುತನವು ಹಿಡಿಸಲಿಲ್ಲ. ಆದರೆ ಗಂಡನೊಂದಿಗೆ ಚರ್ಚೆಮಾಡುವ ಗೊಡವೆಗೆ ಹೋಗದೆ ಅವಳು, ತನ್ನ ಮಗನಿಗೆ ರೋಗ ಗುಣವಾಗಿ ಮತ್ತೆ ಮಾತು ಬಂದರೆ ದೇವರ ಹುಂಡಿಗೆ ಸಾವಿರ ವರಹ ಹಾಕುತ್ತೇನೆಂದು ಹರಕೆ ಹೇಳಿಕೊಂಡಳು. ಆದರೆ ಅದರಿಂದ ಯಾವ ಪ್ರಯೋಜನವೂ ಕಾಣಲಿಲ್ಲ. ಹೀಗಾಗಿ ಅವಳಿಗೆ ಕೂಡಾ ದೇವರ ಮೇಲಿನ ನಂಬುಗೆ ಹೋಯಿತು.

ಇಷ್ಟರಲ್ಲಿ ಆ ದೇಶದಲ್ಲಿ ಒಬ್ಬ ಪ್ರತ್ಯಕ್ಷ ದೇವರಾಗಿ ಬೆಳಗತೊಡಗಿದನು. ಆ ಮಹಾ ಸ್ವಾಮಿಗಳು ಎಷ್ಟೋ ಮಹಿಮೆಯುಳ್ಳವರೆಂದೂ, ಕುರುಡರಿಗೆ ಕಣ್ಣು ಬರುವ ಹಾಗೆ ಮಾಡಿದವರೆಂದೂ ಜನರು ವಿಧವಿಧವಾಗಿ ಶ್ಲಾಘಿಸಿ ಮಾತಾಡುತ್ತಿದ್ದರು.

ರಾಮಣ್ಣನ ಹೆಂಡತಿಗೆ ಮತ್ತೆ ಆಶೆಯುಂಟಾಗಿ, "ನಮ್ಮ ಹುಡುಗನನ್ನು ಆ ಸ್ವಾಮಿಗಳಿಗೆ ತೋರಿಸೋಣ. ಅವನ ರೋಗ ಗುಣವಾಗಲಿಕ್ಕೂ ಸಾಕು" ಎಂದಳು ಗಂಡನೊಂದಿಗೆ.

"ಮನುಷ್ಯನು ದೇವರಾಗುವುದೆಂದರೇನು? ಸನ್ಯಾಸಿಗಳು ರೋಗಗಳನ್ನು ಗುಣಪಡಿಸುತ್ತಾರೆಂದರೆ ವೈದ್ಯರೂ, ವೈದ್ಯಶಾಸ್ತ್ರವೂ ಯಾವುದಕ್ಕೆ? ಇದೆಲ್ಲಾ ಸುಳ್ಳು, ಮೋಸ. ನಾನು ಎಂದಿಗೂ ನಂಬಲಾರೆ" ಎಂದ ರಾಮಣ್ಣ.

ರಾಮಣ್ಣನೇನೋ ತನ್ನ ನಂಬುಗೆಯ ಪ್ರಕಾರ ತನ್ನ ರೋಗಿಷ್ಟ ಮಗನೊಂದಿಗೆ ಊರೂರು ತಿರುಗಾಡಿ, ಅನೇಕಮಂದಿ ಘನ ವೈದ್ಯರಿಗೆ ತೋರಿಸಿದ್ದನು. ಅದಾವುದೂ ಪ್ರಯೋಜನವಾಗಲಿಲ್ಲ.

ಹೀಗಿರುವಾಗ ಮಹಾಭಿಷಕ್ಕು ಎಂಬ ವೈದ್ಯನೊಬ್ಬ ದೇಶ ಸಂಚಾರ ಮಾಡುತ್ತಾ ರಾಮಣ್ಣನಿರುವ

ಊರಿಗೆ ಬಂದನು. ಅವನು ಆ ಊರಿನಲ್ಲಿ ಹತ್ತು ದಿನಗಳು ಮಾತ್ರ ಇರುವುದಾಗಿ ಪ್ರಕಟಪಡಿಸಿದ್ದನು. ಅವನಿಂದ ಗುಣವಾಗದ ರೋಗಗಳೇ ಇಲ್ಲವೆಂದು ಗೊತ್ತಾಗಿತ್ತು. ಊರಜನರು ಆ ಮಹಾಭಿಷಕ್ಕುವಿನ ದರ್ಶನಕ್ಕಾಗಿ ಸಾಲುಗಟ್ಟಿ ಹೋಗುತ್ತಿದ್ದರು. ರಾಮಣ್ಣ ಕೂಡಾ ತನ್ನ ಮಗನನ್ನು ಕರೆದೊಯ್ದು ಅವನಿಗೆ ತೋರಿಸಿದನು. ಮಹಾಭಿಷಕ್ಕು ಹುಡುಗ ನನ್ನು ಪರೀಕ್ಷೆ ಮಾಡಿ. ಮೂರು ಗುಳಿಗೆಗಳನ್ನು ಕೊಟ್ಟು, ದಿನಕ್ಕೆ ಒಂದು ಗುಳಿಗೆಯಂತೆ ಕೊಡ ಬೇಕೆಂದು ಹೇಳಿದನು.

ಮೊದಲನೇ ಗುಳಿಗೆಗೇ ಹುಡುಗನಿಗೆ ಮಾತು ಹೊರಡುವ ಚಿಕ್ಕ ಚಿಕ್ಕ ಧ್ವನಿಗಳು ಬಂದುವು. ಎರಡನೇ ಗುಳಿಗೆಯಲ್ಲಿ ಮೊದಲಿನಂತೆ ಸ್ಪಷ್ಟವಾಗಿ ಮಾತುಗಳು ಬರತೊಡಗಿ ಶರೀರದಲ್ಲಿ ಮುಖದಲ್ಲಿ ಆರೋಗ್ಯ ಕಳೆಯೂ ಎದ್ದಿತು. ಮೂರನೇ ಗುಳಿಗೆ ಯಿಂದ ಪೂರ್ತಿ ಗುಣಮುಖನಾದನು.

ರಾಮಣ್ಣನು ಅತ್ಯಂತ ಸಂತೋಷದಿಂದ ಮಹಾಭಿ ಷಕ್ಕುವನ್ನು ಹೋಗಿ ನೋಡಿ, "ಸ್ವಾಮಿ, ತಾವು ಸಾಮಾನ್ಯರಲ್ಲ. ನಿಮ್ಮ ವಿಷಯ ಇಷ್ಟು ಕಾಲದ ವರೆಗೆ ನನಗೆ ತಿಳಿಯದೆ ಹೋದುದು ನನ್ನ ದುರ ದೃಷ್ಟವೆನ್ನಬೇಕು" ಎಂದನು.

ಆ ಮಾತು ಕೇಳಿ ಮಹಾಭಿಷಕ್ಕು ನಕ್ಕು, "ಅಯ್ಯಾ, ನನ್ನ ಹತ್ತಿರ ಅಮೋಘವಾದ ಔಷಧಗಳಿವೆ. ಮಹಿಮೆಯೆಲ್ಲವೂ ಔಷಧಗಳದೇ, ಇದರಲ್ಲಿ ನನ್ನ ದೊಡ್ಡತನವೇನೂ ಇಲ್ಲ. ಸಾಧಾರಣ ರೋಗಗಳ ನ್ನಾದರೆ ಯಾರಾದರೂ ಗುಣಪಡಿಸುತ್ತಾರೆ. ನನ್ನ ಹತ್ತಿರ ಅಸಾಧಾರಣ ವ್ಯಾಧಿಗಳಿಗೆ ತಕ್ಕುದಾದ ಔಷಧ ಗಳಿವೆ. ಆದುದರಿಂದ ನಾನು ಒಂದು ಸ್ಥಳದಲ್ಲಿರದೆ ಊರೂರು ತಿರುಗಾಡುತ್ತ, ಎಲ್ಲೆಲ್ಲಿರುವ ಮೊಂಡಿ ವ್ಯಾಧಿಗಳನ್ನು ಗುಣಪಡಿಸುತ್ತೇನೆ. ನನ್ನ ವೈದ್ಯಕ್ಕೆ ಪ್ರತಿಫಲವಾಗಿ, ಯಾರು ಎಷ್ಟುಕೊಡಲು ಶಕ್ತರೋ



ಅಷ್ಟನ್ನೇ ಪಡೆದುಕೊಳ್ಳುತ್ತೇನೆ. ಆ ಹಣ ನನ್ನ ಸಂಚಾರಕ್ಕೆ ಉಪಯೋಗ ಬೀಳುತ್ತದೆ" ಎಂದನು.

ರಾಮಣ್ಣ ಅವನಿಗೆ ಸಾವಿರ ವರಹಗಳನ್ನು ಕೊಟ್ಟು, ಆತನ ಕಾಲಿಗೆ ಬಿದ್ದು, "ಮಹಾಸ್ವಾಮಿ, ಇಷ್ಟುಕಾಲ ನಾನು ದೇವರಿಲ್ಲವೆಂದು ತಿಳಿದಿದ್ದೆ. ನೀವೇ ದೇವರೆಂದು ಈಗ ತಿಳಿಯಿತು." ಎಂದನು.

ಮಹಾಭಿಷಕ್ಕು ರಾಮಣ್ಣನನ್ನು ಭುಜ ತಟ್ಟಿ ಏಳು ವಂತೆ ಹೇಳಿ, "ನಿನಗೆ ದೇವರ ಮೇಲೆ ನಂಬುಗೆ ಇಲ್ಲವೇನು ? ಹಾಗಾದರೆ ನೀನು ಪ್ರತ್ಯಕ್ಷದೇವರಾದ ಮಹಾಸ್ವಾಮಿಗಳನ್ನು ನೋಡಿಲ್ಲವೆಂದು ಕಾಣುತ್ತದೆ. ಒಮ್ಮೆ ಅವರ ದರ್ಶನ ಮಾಡಿದೆಯೆಂದರೆ ಖಂಡಿತ ವಾಗಿ ನಿನಗೆ ದೇವರ ಮೇಲೆ ನಂಬುಗೆ ಉಂಟಾಗು ತ್ತದೆ. ಅವರೊಬ್ಬರೇ ಪ್ರತ್ಯಕ್ಷದೇವರು. ನಾನು ಆ ಮಹಾಸ್ವಾಮಿಗಳ ಭಕ್ತ. ಅವರ ಆದೇಶಾನು ಸಾರವಾಗಿಯೇ ನಾನು ಹೀಗೆ ದೇಶಸಂಚಾರ ಮಾಡು ತ್ತಿದ್ದೇನೆ. ಒಂದುಸಾರಿ ಹೋಗಿ ಅವರನ್ನು ನೋಡಿ

ಬಾರಪ್ಪ" ಎಂದನು. ರಾಮಣ್ಣನಿಗೆ ಆಶ್ಚರ್ಯ ವಾಯಿತು. ತಾನು ದೇವರೆಂದು ಭಾವಿಸುವ ಮಹಾ ಭಿಷಕ್ಕು ಹೇಳಿದುದಕ್ಕಾಗಿಯೇ ರಾಮಣ್ಣನು ಆ ಮಹಾಸ್ವಾಮಿಯವರ ದರ್ಶನಮಾಡಿ ಬಂದನು. ಆವನ ಹೆಂಡತಿ ಆ ಸ್ವಾಮಿಗಳ ವಿಶೇಷವನ್ನು ಕುರಿತು ಗಂಡನನ್ನು ಕೇಳಿದಳು.

"ಅವರು ನಮ್ಮಂತೆಯೇ ಇದ್ದಾರೆ. ಅವರನ್ನು ಪ್ರತ್ಯಕ್ಷ ದೇವರೆಂದು ಏಕೆ ಹೇಳುತ್ತಿದ್ದಾರೋ ನನಗಂತೂ ತಿಳಿಯಲಿಲ್ಲ. ಪ್ರತ್ಯಕ್ಷ ದೇವರೆಂದರೆ ನನ್ನ ಅನುಭವಪೂರ್ವಕವಾಗಿ ಆ ಮಹಾಭಿಷಕ್ಕು ಒಬ್ಬರೇ!" ಎಂದ ರಾಮಣ್ಣ.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ನಿನಗೇನು ತೋರುತ್ತದೆ? ರಾಮಣ್ಣನನ್ನು ಆಸ್ತಿಕನೆನ್ನಬೇಕೇ ನಾಸ್ತಿಕನೆನ್ನಬೇಕೆ? ಎಂದಿಗೂ ದೇವಸ್ಥಾನಕ್ಕೆ ಹೋಗಿ ದೇವರಿಗೆ ನಮಸ್ಕಾರ ಮಾಡ ದಿರುವವನು ಮಹಾಭಿಷಕ್ಕುವಿನಲ್ಲಿ ದೇವರನ್ನು ಕಾಣಲು ಹೇಗೆ ಸಾಧ್ಯವಾಯಿತು? ತನ್ನಲ್ಲಿ ಪ್ರತ್ಯೇಕತೆ ಏನಿಲ್ಲವೆಂದೂ, ಪ್ರತ್ಯಕ್ಷ ದೈವವು ಸ್ವಾಮಿಗಳೇ ಎಂದೂ ಆ ಮಹಾಭಿಷಕ್ಕು ಸ್ಪಷ್ಟವಾಗಿ ಹೇಳಿದರೂ ಆ ಸ್ವಾಮಿಗಳಲ್ಲಿ ರಾಮಣ್ಣನಿಗೇಕೆ ದೇವತ್ವ ಕಾಣ ಲಿಲ್ಲ? ಈ ಸಂದೇಹಕ್ಕೆ ಸರಿಯಾದ ಸಮಾಧಾನ ತಿಳಿದಿದ್ದೂ ಹೇಳದೆಹೋದರೆ ನಿನ್ನ ತಲೆ ಒಡೆದು ಪುಡಿಯಾಗುತ್ತದೆ." ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ದೇವರಿಗೆ ಯಾವ ಪ್ರಮಾಣಗಳೂ ಇಲ್ಲ. ಯಾರಿಗೆ ದೇವರು ಯಾವ ರೂಪದಲ್ಲಿ ಏಕೆ ಕಾಣುವನೋ ಅದು ಅವರವರಿಗೇ ಗೊತ್ತು. ಬೇರೆಬೇರೆ ಮತಗಳವರು ಒಬ್ಬರ ದೇವನನ್ನು ಮತ್ತೊಬ್ಬರು ನಿರಾಕರಿಸಿ ಇತರ ಮತಗಳವರನ್ನು ನಾಸ್ತಿಕರು ಎನ್ನುತ್ತಾರೆ. ರಾಮಣ್ಣ ಇತರರಿಗೆ ಉಪಕಾರಮಾಡುವ ಗುಣವುಳ್ಳವನು. ದೇವರನ್ನು ಪೂರ್ತಿಯಾಗಿ ನಂಬಿಕೊಂಡಿರುವವನು ಎಲ್ಲಾ ಭಾರವನ್ನೂ ದೇವರಿಗೆ ಬಿಟ್ಟುಬಿಡುವನು. ಹಾಗೆ ಮಾಡದ ಕಾರಣದಿಂದಲೇ ರಾಮಣ್ಣನು ನಾಸ್ತಿಕನಾದನು. ಮಹಾಭಿಷಕ್ಕು ದೇವರು ಮಾಡ ಲಾಗದ ಕೆಲಸವನ್ನು, ಹರಕೆಗಳಿಗೆ ಕೂಡಾ ಗುಣವಾಗದ ರೋಗಗಳನ್ನು ಗುಣಪಡಿಸಿದ್ದಾನೆ. ಅಂತಹ ಕಾರ್ಯ ದಲ್ಲಿಯೇ ಜೀವನ ಸವೆಸುತ್ತಿದ್ದಾನೆ. ಆದುದರಿಂದ ರಾಮಣ್ಣನಿಗೆ ಅವನಲ್ಲಿ ದೇವರು ಕಂಡನು. ತನ್ನನ್ನು ಹುಡುಕಿಕೊಂಡುಬರುವ ಜನರಿಗೆ ಉಪದೇಶಗಳನ್ನು ಮಾಡುವ ಸ್ವಾಮಿಗಳಲ್ಲಿ ಅವನಿಗೆ ಸಾಧಾರಣ ಮನುಷ್ಯನೇ ಕಂಡನು. ಇದರಲ್ಲಿ ವೈರುಧ್ಯವೇನಿಲ್ಲ."

ಈ ರೀತಿಯಾಗಿ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು





# ಪ್ರಾಣಕ್ಕೆ ಬಂದ ವಿದ್ಯೆ

ಒಂದು ಊರಿನಲ್ಲಿ ಶರಭನೆಂಬೊಬ್ಬ ಗೋವಳನಿದ್ದ. ಅವನಿಗಿರುವ ಸರ್ವ ಸೊತ್ತುಗಳೂ ನಾಲ್ಕು ದನಗಳು ಮಾತ್ರವೇ. ಅವನು ಅವುಗಳನ್ನು ಅತ್ಯಂತ ಅಕ್ಕರೆಯಿಂದ ಶ್ರದ್ಧೆಯಿಟ್ಟು ಪೋಷಿಸುತ್ತಿದ್ದನು. ಅವುಗಳನ್ನು ದಿನಾ ಹುಲ್ಲುಗಾವಲಿಗೆ ಕರೆದೊಯ್ಯುತ್ತಿದ್ದನು. ಅವುಗಳನ್ನು ಮೇಯಲು ಬಿಟ್ಟು ಯಾವ ಮರದ ಮೇಲೋ, ನೆರಳು ದಿಣ್ಣೆಯಲ್ಲೋ ಕುಳಿತುಕೊಂಡು ಇಂಪಾಗಿ ಕೊಳಲನ್ನು ಊದುತ್ತಾ ಹೊತ್ತು ಕಳೆಯುವನು. ಅವನ ಗಾಯನ ಇಂಪಾಗಿತ್ತು.

ಒಂದು ದಿನ ಅವನು ಒಂದು ಮರದ ಮೇಲೆ ಕುಳಿತುಕೊಂಡು, ವೇಣುಗಾನದಲ್ಲಿ ಮಗ್ನನಾಗಿರುವಾಗ, ಸಮೀಪದಲ್ಲಿ ಹುಲಿಯ ಗಾಂಡ್ರಿಕೆ ಕೇಳಿಸಿತು. ಅವನು ಬೆಚ್ಚಿಬಿದ್ದು ತನ್ನ ದನಗಳು ಮೇಯುತ್ತಿರುವ ಕಡೆಗೆ ನೋಡಿದನು.

ಆಗ ಮೈನವಿರೇಳಿಸುವಂತಹ ಅಪೂರ್ವ ದೃಶ್ಯವೊಂದು ಅವನ ಕಣ್ಣಿಗೆ ಬಿತ್ತು. ತುಂಬ ಬೆರಗಾಗಿ ಕಣ್ಣು ಬಾಯಿಬಿಟ್ಟು ಮರದ ವಿಗ್ರಹದಂತಾಗಿ ನೋಡತೊಡಗಿದನು. ಹೀಗೂ ನಡೆಯುವುದುಂಟೆ? ಶರಭನ ನಾಲ್ಕು ದನಗಳೂ ದೊಡ್ಡದೊಂದು ಹುಲಿಯನ್ನು ಅಡ್ಡಗಟ್ಟಿ ಮುತ್ತಿ ಕೊಂಬುಗಳಿಂದ ಅದನ್ನು ತಿವಿಯುತ್ತಿದ್ದುವು. ಹುಲಿ ನಾಲ್ಕು ದಿಕ್ಕುಗಳಿಂದ ಬರುವ ತಿವಿತದಿಂದ ತಪ್ಪಿಸಿಕೊಂಡು ಓಡಬೇಕೆಂದು ಪ್ರಯತ್ನ ಪಡುತ್ತಿದ್ದಿತು. ಆದರೆ ನಾಲ್ಕು ದನಗಳೂ ಅದನ್ನು ಓಡಲು ಬಿಡದೆ ಅಡ್ಡಡ್ಡ ಹಾಯ್ದು ಆತ್ಮಾವೇಶದಿಂದ ತಿವಿದು ತಿವಿದೇ ಕೊಂದು ಹಾಕಿಬಿಟ್ಟುವು.

ಶರಭನು ತನ್ನ ದನಗಳ ಪೌರುಷವನ್ನು ನೋಡಿ ಬಹಳ ಹೆಮ್ಮೆಪಟ್ಟನು. ದನಗಳಾದರೋ ಆಮೇಲೆ ಯಾವ ವಿಶೇಷವೂ ನಡೆಯದಂತೆ ಹುಲ್ಲು ಮೇಯಲು ತೊಡಗಿದುವು.

ಮತ್ತೆ ಸ್ವಲ್ಪ ಕಾಲದಲ್ಲಿ ಆ ಪ್ರಾಂತಕ್ಕೆ ಬರಬೇಕಾಗಿದ್ದ ಮಳೆ ಬಾರದೆಹೋಯಿತು. ನೆಲವೆಲ್ಲಾ ಒಣಗಿ ಒಡೆದು ಹುಲ್ಲು ನೀರುಗಳಿಗೆ ಬರಬಂದಿತು. ಶರಭನು ತನ್ನ ದನಗಳನ್ನು ಹೊಡೆದುಕೊಂಡು ದೂರ ಪ್ರಾಂತಕ್ಕೆ ಹೋದನು.

ದೂರದಲ್ಲಿದ್ದೊಂದು ಗುಡ್ಡವನ್ನು ದಾಟಿ ಅದರಾಚೆಗೆಹೋದನು. ಆ ಪ್ರಾಂತದಲ್ಲಿ ಮಂದವಾಗಿ ಬೆಳೆದ ಹುಲ್ಲುಗಾವಲನ್ನು ನೋಡಿ ಶರಭನಿಗೆ

ಬಿ. ಎನ್. ರಾವ್



ಅತ್ಯಾಶ್ಚರ್ಯವಾಯಿತು. ಈ ಹುಲ್ಲು ಗಾವಲಲ್ಲಿ ಮೇಯಲು ದನಗಳೇ ಇಲ್ಲವೇನೋ ? ಏನೇ ಇರಲಿ, ತನ್ನ ದನಗಳಿಂದ ಅಲ್ಲಿಯ ಹುಲ್ಲು ಮುಗಿಯುವ ವರೆಗೂ ಆ ಪ್ರಾಂತದಲ್ಲೇ ಇದ್ದರಾಯಿತೆಂದು ತೋರಿತು. ಶರಭನು ಅರ್ಧಮೈಲು ದೂರದಲ್ಲಿದ್ದ ಒಂದು ಗ್ರಾಮಕ್ಕೆಹೋದನು. ಅಲ್ಲಿಯೇ ತನಗಾಗಿ ಒಂದು ಬಿಡಾರವನ್ನೂ ನೋಡಿಕೊಂಡನು. ಬಿಡಾರದ ಹತ್ತಿರ ತನ್ನ ದನಗಳಿಗಾಗಿ ಹಟ್ಟಿಯನ್ನೂ ಕಟ್ಟಿದನು.

ಆ ಊರಿನಲ್ಲಿ ಬೇಕಾದಷ್ಟು ದನಗಳೇನೋ ಇದ್ದುವು. ಅವೆಲ್ಲಾ ಏಕೋ ಸೊರಗಿದ್ದುವು. "ಗುಡ್ಡದ ಬದಿಯಲ್ಲಿ ಅಷ್ಟೊಂದು ಹಸಿರು ಹುಲ್ಲು ತುಂಬಿರುವಾಗ, ಕಾಲುವೆಯಲ್ಲಿ ಪ್ರಯಾಣ ಮಾಡುವವನು ಬಾಯಾರಿಕೆಯಿಂದ ಸಾಯುವ ಹಾಗೆ ನಿಮ್ಮ ದನಗಳೆಲ್ಲಾ ಇಷ್ಟೊಂದು ಸೊರಗಿ ಹೋಗಿವೆಯಲ್ಲಾ ? ಏಕೆ ?" ಎಂದು ಶರಭನು ಆ ಊರಿನವರೊಂದಿಗೆ ಪ್ರಶ್ನೆಮಾಡಿದನು.

ಅದೇನು ಹೇಳುವುದು ಬಿಡು ? ಗುಡ್ಡದ ಸುತ್ತಲೂ ಇರುವ ಪೊದೆಗಳಲ್ಲಿ ಹುಲಿಗಳೂ ಸಿಂಹಗಳೂ ಸೇರಿಕೊಂಡಿವೆ. ಅಲ್ಲಿಗೆ ಮೇಯಲು ಹೋದ ಪಶುಗಳು ಮತ್ತೆ ಹಿಂದಿರುಗಿ ಬಾರವು. ಆದ್ದರಿಂದ ನಮ್ಮ ದನಗಳನ್ನು ಆ ಕಡೆ ಹೋಗಲು ಬಿಡಲಾರೆವು. ನೀನು ಕೂಡಾ ನಿನ್ನ ದನಗಳನ್ನು ಹತ್ತಿರದಲ್ಲೇ ಮೇಯಿಸುವುದು ಒಳ್ಳೆಯದು. ಈ ಊರಿಗೆ ಹೊಸಬನಾಗಿರುವಿ. ಅಲ್ಲಿಯ ಹುಲ್ಲು ನೋಡಿ ಮೋಸ ಹೋಗಬೇಡ." ಎಂದರು ಗ್ರಾಮಸ್ಥರು.

"ಚಿಂತೆಯಿಲ್ಲ. ನಾನು ಅಲ್ಲಿಯೇ ನನ್ನ ದನಗಳನ್ನು ಮೇಯಲು ಬಿಡುತ್ತೇವೆ. ನನ್ನ ದನಗಳನ್ನು ಹುಲಿ ಸಿಂಹಗಳು ಏನೂ ಮಾಡಲಾರವು. ಅವುಗಳ ಸಂಗತಿ ನಿಮಗೆ ಗೊತ್ತಿಲ್ಲ ಬಿಡಿ" ಎಂದ ಶರಭ.

"ಪಾಪ ! ಏನೋ ಮಹಾ ಅಂದುಕೊಂಡಿದ್ದಾನೆ ತನ್ನ ದನಗಳನ್ನು ! ಅವನ ದನಗಳು ಅವನಿಗೆ ದಕ್ಕಲಾರವು ! ಅವನ ಗರ್ವ ಕರಗಿ ಹೋಗಲಿಕ್ಕಿದೆ. ಆಗ ತಿಳಿದೀತು ನಮ್ಮ ಬುದ್ಧಿ" ಎಂದು ಗ್ರಾಮಸ್ಥರು ತಮ್ಮೊಳಗೆ ಅಂದುಕೊಂಡರು.

ಅಲ್ಲಿ ನಡೆಯುವ ನಿಜ ಸಂಗತಿ ಏನೆಂದರೆ, ಗುಡ್ಡದ ಹಿಂದೆ ಒಬ್ಬ ಭಂಡಕಳ್ಳನಿದ್ದ. ಭರಮನೆಂದು ಅವನ ಹೆಸರು. ಅವನು ಹುಲಿಯಂತೆಯೂ ಸಿಂಹದಂತೆಯೂ ಕೂಗಲೂ ಗರ್ಜಿಸಲೂ ಕಲಿತಿದ್ದನು. ಆ ಹುಲ್ಲುಗಾವಲಿಗೆ ಯಾರಾದರೂ ಪಶುಗಳನ್ನು ಮೇಯಿಸಲು ತಂದಾಗ, ಅವನು ಆಳೆತ್ತರದ ಹುಲ್ಲಿನ ಎಡೆಯಲ್ಲಿ ಅಡಗಿಕೊಂಡು ಹುಲಿಯಂತೆ ಗಾಂಡ್ರಿಸುವನು. ದನಗಳು ಹೆದರಿ ಓಡುವಾಗ, ಗಾಂಡ್ರಿಸುತ್ತಾ ಅವು ಗ್ರಾಮಕ್ಕೆ ದೂರವಾಗಿ ಓಡುವಂತೆ ಮಾಡುವನು. ಅಲ್ಲಿಂದ ಅವುಗಳನ್ನು ಗುಡ್ಡದಾಚೆಗೆ ಹಿಡಿದೊಯ್ದು ಗುರುತಿಲ್ಲದ ಊರುಗಳಲ್ಲಿ ಮಾರಿ ದುಡ್ಡು ಮಾಡಿಕೊಳ್ಳುವನು. ಅವನು ಹುಲಿಯಂತೆ ಸಿಂಹದಂತೆ ಗರ್ಜಿಸುವುದನ್ನು ಕೇಳಿದಕೂಡಲೇ ಪಶುಗಳನ್ನು

ನೋಡಿಕೊಳ್ಳುವವರು ಜೀವಭಯದಿಂದ ಓಡಿ ಹೋಗಿಬಿಡುವರು. ಹೀಗೆ ಅನೇಕ ಪಶುಗಳನ್ನು ಕಳೆದುಕೊಂಡ ಮೇಲೆ ಗೊತ್ತಿದ್ದವರಾರೂ ಆ ಕಡೆಗೆ ತಮ್ಮ ಪಶುಗಳನ್ನು ಬಿಡುತ್ತಿದ್ದಿಲ್ಲ. ಅದನ್ನು ಸಾವಿನ ಹುಲ್ಲುಗಾವಲೆಂದು ಹೇಳುತ್ತಿದ್ದರು.

ಈ ಗುಟ್ಟು ಶರಭನಿಗೂ ಗೊತ್ತಿಲ್ಲ. ಅವನಿಗೆ ಗೊತ್ತಿರುವುದೆಲ್ಲಾ ತನ್ನ ದನಗಳು ಹುಲಿ ಸಿಂಹಗಳಿಗೆ ಭಯಪಡುವುದಿಲ್ಲ ಎಂಬುದಷ್ಟೇ.

ಅನೇಕ ದಿನಗಳಿಂದ ಕಳ್ಳತನ ಮಾಡಲು ಯಾವ ಪಶುಗಳೂ ಸಿಗದೆ ಕಷ್ಟಪಡುತ್ತಿದ್ದ ಕಳ್ಳಭರಮ ಒಂದು ದಿನ ಶರಭನ ದನಗಳು ಅಲ್ಲಿ ಮೇಯುತ್ತಿರುವುದನ್ನು ನೋಡಿದನು. ಅವು ನಾಲ್ಕೂ ಚೆನ್ನಾಗಿ ಬಲಿತು ಕೊಬ್ಬಿದ ದನಗಳು. ಅವುಗಳ ಯಜಮಾನ ಶರಭನು ಒಂದು ಮರದಕೆಳಗೆ ನಿಶ್ಚಿಂತೆಯಿಂದ ಕೊಳಲೂದುತ್ತಾ ಕುಳಿತಿರುವುದನ್ನೂ ಕಳ್ಳಭರಮ ನೋಡಿದ. ಬಹಳ ಅನುಕೂಲ! ಆ ನಾಲ್ಕು ದನಗಳನ್ನೂ ಮಾರಿದರೆ ಇಮ್ಮಡಿ ಹಣ ಸಿಕ್ಕುವುದೆಂದು ಅವನಿಗೆ ಮುಮ್ಮಡಿ ಸಂತೋಷವಾಯಿತು.

ಶರಭನು ಆ ದನಗಳನ್ನು ಅಪಹರಿಸಲು ನಿಶ್ಚಯಿಸಿ, ತಾನು ಯಾವ ಪೊದರಿನಲ್ಲಿ ಅಡಗಿಕೊಂಡರೆ ಏನು ನಡೆಯುತ್ತದೆ, ಹೇಗಾಗುತ್ತದೆ ಎಂಬುದನ್ನೆಲ್ಲ ಅಳೆದು ನೋಡಿ, ಮಾರನೇ ದಿನ ಶರಭನ ದನಗಳಿಗಿಂತಲೂ ಮುಂದಾಗಿ ಬಂದು ಆ ಪೊದರಿನೊಳಗೆ ಅಡಗಿ ಕುಳಿತನು.

ಶರಭನ ದನಗಳು ಆ ಪ್ರಾಂತಕ್ಕೆ ಬಂದು ಮೇಯ ತೊಡಗಿದುವು. ಶರಭನು ವೇಣುವಾದನಕ್ಕೆ ಪ್ರಾರಂಭಿಸಿದ್ದೂ ಆಯಿತು.

ಸ್ವಲ್ಪ ಹೊತ್ತಿನಲ್ಲಿ ಅವನಿಗೆ ದೊಡ್ಡದೊಂದು ಹುಲಿಯಗಾಂಡ್ರಿಕೆ ಕೇಳಿ ಬಂದು ಮೆಟ್ಟಿಬೀಳಿಸಿತು. ಆದರೆ ಅವನು ಸಮಾಳಿಸಿಕೊಂಡು ದನಗಳ ಕಡೆಗೆ ನೋಡಿದನು. ಅವನು ಊಹಿಸಿಕೊಂಡಂತೆಯೇ




ನಾಲ್ಕು ದನಗಳೂ ಒಂದು ಪೊದರಿನ ನಾಲ್ಕು ಸುತ್ತಲೂ ಸೇರಿ ತಲೆಗಳನ್ನು ಬಾಗಿಸಿ, ಕಾಲುಗಳನ್ನು ಗಟ್ಟಿಯಾಗಿ ಊರಿ ನಿಂತುವು. ಪೊದರಿನೊಳಗಿನಿಂದ ಹುಲಿಹಾರಿದ ಮರುಕ್ಷಣವೇ ಹಾಯ್ದು ಹಾರಿಸಿ ಕೆಡವಿ ತಿವಿದು ಕೊಲ್ಲಲು ಅವು ಸಿದ್ಧವಾದುವು. ಶರಭನು ಕೊಳಲನಾದವನ್ನು ನಿಲ್ಲಿಸಿ ನಡೆಯಲಿರುವ ವಿಚಿತ್ರನೋಡುತ್ತಾ ಸುಮ್ಮನಿದ್ದನು.

ಇಷ್ಟರೊಳಗೆ ಪೊದರಿನೊಳಗಿನ ಕಳ್ಳ ಭರಮನಿಗೆ ವಿಚಿತ್ರ ಅನುಭವವಾಗ ತೊಡಗಿತು. ತನ್ನ ಗರ್ಜನೆ ಕೇಳಿ ದನಗಳು ಹೆದರಿ ಓಡುವುದಕ್ಕೆ ಬದಲಾಗಿ ತಾನು ಆಹ್ವಾನ ಮಾಡಿದಂತೆ ಪೊದೆಯ ಬಳಿಗೆ ಬಂದು ನಿಂತಿವೆ. ಇವುಗಳಿಗೆ ಹುಲಿಯ ಗರ್ಜನೆ ಅಂದರೆ ಭಯವಿಲ್ಲವೇನೋ ?

ಅವನು ಸಿಂಹದಂತೆ ಗರ್ಜಿಸಿದನು. ಆ ಗರ್ಜನೆಗೂ ದನಗಳು ಹೆದರದೆ ಭುಸುಗುಡುತ್ತಾ ಗೊರಸುಗಳಿಂದ ನೆಲವನ್ನು ಭರ್ರನೆ ಗೀರಿ " ದಮ್ಮಿದ್ದರೆ

ಬಾ ಹೊರಗೆ! ನಿನ್ನ ಪ್ರಾಣ ತೆಗೀತೇವೆ!" ಎಂದು ಹೇಳುವಂತಿದ್ದುವು. ಭರಮನ ಮೈ ಜುಮುಗುಟ್ಟ ತೊಡಗಿತು.

ತನಗೆ ದನಗಳು ದಕ್ಕುವುದಿಲ್ಲವೆಂದೂ, ತನ್ನ ಜೀವಕ್ಕೆ ಅಪಾಯ ಬಂದಿದೆಯೆಂದೂ ತಿಳಿಯಲು ಕಳ್ಳ ಭರಮನಿಗೆ ಸ್ವಲ್ಪ ಹೊತ್ತು ಬೇಕಾಯಿತು. ಅದು ತಿಳಿದ ಮೇಲೆ ಅವನಿಗೆ ಬೆವರಿಳಿಯ ತೊಡಗಿತು. ಸ್ವಲ್ಪ ಹೊತ್ತು ಹುಲಿಯಂತೆಯೂ, ಮತ್ತೊಮ್ಮೆ ಸಿಂಹದಂತೆಯೂ ಕೂಗಿ ಹೆದರಿಸ ತೊಡಗಿದನು. ಆದರಿಂದೇನೂ ಪ್ರಯೋಜನ ಕಾಣಲಿಲ್ಲ.

ಆದರೆ ಭಯಂಕರ ಹುಲಿಸಿಂಹಗಳ ಗರ್ಜನೆ ಕೇಳಿ ಗ್ರಾಮಪರಿಸರಗಳಲ್ಲಿ ಮೇಯುತ್ತಿದ್ದ ಪಶುಗಳು ಹೆದರಿ ಎತ್ತೆತ್ತೋ ಓಡಿ ಹೋಗುತ್ತಿದ್ದುವು. ಕಟ್ಟಿಹಾಕಲ್ಪಟ್ಟಿದ್ದುವು ಕೂಡಾ ಹಗ್ಗವನ್ನು ಕಡಿದುಕೊಂಡೇ ಓಡಿದುವು. ಊರೊಳಗಿನ ಜನರು ಆ ಪಶುಗಳಿಗಾಗಿ ಆಚೆ ಈಚೆ ಓಡಾಡುತ್ತಿದ್ದರು.

ಅಷ್ಟರಲ್ಲಿ ಶರಭನು ಅವರ ಕಡೆಗೆ ಓಡಿ ಹೋಗಿ, "ನನ್ನ ದನಗಳು ಹುಲಿಯನ್ನೂ, ಸಿಂಹವನ್ನೂ ಹಿಡಿದಿವೆ! ಯಾರೂ ಹೆದರಬೇಕಾಗಿಲ್ಲ. ಬನ್ನಿರಿ! ನೋಡಿರಿ!" ಎಂದು ಕೆಲವರನ್ನು ಕರೆದುಕೊಂಡು ಬಂದನು. ಅವರು ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಶರಭನ ಹಿಂದೆ ಬಂದರು.

ನಾಲ್ಕು ದನಗಳು ಸುತ್ತಿಕೊಂಡಿರುವ ಪೊದರಿನ ಬಳಿಗೆ ಬಂದ ಕೂಡಲೇ ಶರಭನು ನಿಂತನು. ಊರವರು ಆಶ್ಚರ್ಯದಿಂದ, "ಎಲ್ಲಿದೆ ಹುಲಿ?" ಎಂದು ಕೇಳಿದರು.

"ಅದು ಹಾಗೆಲ್ಲಾ ಹೊರಗೆ ಬಂದುಬಿಡುತ್ತದೆಯೇ? ನನ್ನ ದನಗಳು ಸೀಳಿಹಾಕಲಾರವೇ? ನೀವೆಲ್ಲಾ ಆ ಪೊದರಿನ ಮೇಲೆ ಕಲ್ಲು ಬಿಸುಡಿರಿ. ಹುಲಿಯ ಹಾಗೂ ಸಿಂಹದ ಹಾಗೂ ಕೂಗುವ ವಿಚಿತ್ರ ಪ್ರಾಣಿ ಹೊರಗೆ ಬರುತ್ತೆ ನೋಡಿ!" ಎಂದ ಶರಭ.

ನಾಲ್ಕು ಮಂದಿ ಬಲವಾಗಿ ಕಲ್ಲು ತೂರಲು ಪ್ರಾರಂಭಿಸುತ್ತಲೇ ದನಗಳು ಪೊದರಿನ ಗುರಿ ಬಿಟ್ಟು ಆಚೆಗೆ ಹೋದುವು. ತಲೆಯಲ್ಲಿಯೂ ಶರೀರದಲ್ಲಿಯೂ ಗಾಯಗಳಾಗಿ ರಕ್ತ ಸುರಿಯುತ್ತಿರಲು, ಕಳ್ಳ ಭರಮ ಪೊದೆಯೊಳಗಿಂದ ಎದ್ದು ತಡಕಾಡುತ್ತಾ ಬಂದು ಜನರ ಕಾಲ ಮೇಲೆ ಬಿದ್ದನು.

ತಮ್ಮ ದನಗಳನ್ನು ಕಳವು ಮಾಡುವ ಉಪಾಯದವನು ಇವನೆಂದು ಗೊತ್ತಾದ ಮೇಲೆ, ಅವರೆಲ್ಲ ಅವನನ್ನು ಮೆತ್ತಗೆ ಮಾಡಿ ಕೊನೆ ಪ್ರಾಣದೊಂದಿಗೆ ಬಿಟ್ಟರು. ಅಂದಿನಿಂದ ಶರಭನು ಆ ಪ್ರಾಂತಕ್ಕೇ ನಾಯಕನಂತಾದನು. ಊರೊಳಗಿನ ಪಶುಗಳು ಆ ಗುಡ್ಡದ ಸುತ್ತಲೂ ಮೇಯುತ್ತ ಒಳ್ಳೆಯದಾದುವು.



# ಉಪದೇಶ

ಜಯರಾಮಯ್ಯ ದೊಡ್ಡ ಆಸ್ತಿವಂತ. ಒಂದು ದಿನ ಅವನ ಹತ್ತಿರ ಒಬ್ಬ ಯಾಚಕನು ಬಂದನು. ಅವನನ್ನು ನೋಡಿದ ಜಯರಾಮಯ್ಯ ಅವನೇಕೆ ಬಂದನೆಂಬುದನ್ನು ಊಹಿಸಿ, "ಬಂದಿರಾ, ಬನ್ನಿ ಬನ್ನಿ !" ಎಂದನು. ಜಯರಾಮಯ್ಯ ತನಗೇನೋ ಕೊಡುತ್ತಾನೆಂದು ಯಾಚಕನು ಉಬ್ಬಿಕೊಂಡನು. "ಈ ಮನೆಯನ್ನು ಎರಡು ಲಕ್ಷ ಖರ್ಚುಮಾಡಿ ಕಟ್ಟಿಸಿದೆ" ಎಂದನು ಅವನೊಂದಿಗೆ ಜಯರಾಮಯ್ಯ.

"ಬಹಳ ಚೆನ್ನಾಗಿದೇರೀ" ಎಂದ ಯಾಚಕ. ತರುವಾಯ ಯಾಚಕನನ್ನು ಮನೆಯೊಳಗೆಲ್ಲಾ ತಿರುಗಾಡಿಸುತ್ತ, ಒಂದು ಕೋಣೆಯಲ್ಲಿದ್ದ ಕಬ್ಬಿಣದ ಪೆಟ್ಟಿಗೆ ಅದರಲ್ಲಿರುವ ಬಂಗಾರ ನಗಗಳು, ಮತ್ತೊಂದು ಕೋಣೆಯಲ್ಲಿರುವ ಬೆಳ್ಳಿ ಸಾಮಾನುಗಳು, ಇನ್ನೊಂದು ಕೋಣೆಯಲ್ಲಿದ್ದ ಧಾನ್ಯದ ಚೀಲಗಳು, ಹೊಸ ಬಗೆಯ ಆಸನಗಳು ಎಲ್ಲವನ್ನೂ ತೋರಿಸಿದನು.

"ಲಕ್ಷ್ಮೀಪುತ್ರರೆಂದರೆ ನೀವೇ ಸ್ವಾಮಿ !" ಎಂದ ಎಲ್ಲವನ್ನೂ ನೋಡಿದ ಯಾಚಕ.

ಕಡೆಗೆ ಜಯರಾಮಯ್ಯ ಅವನನ್ನು ಮನೆ ಹಿಂದೆ ಕರೆದುಕೊಂಡು ಹೋಗಿ "ಈ ಸೊತ್ತುಗಳನ್ನೆಲ್ಲಾ ನಾನು ಕಷ್ಟಪಟ್ಟು ಸಂಪಾದಿಸಿದೇನೇ ಹೊರತು ಒಬ್ಬರನ್ನು ಯಾಚನೆ ಮಾಡಿ ಅಲ್ಲ" ಎಂದು ಹಿಂಬದಿಯ ಬಾಗಿಲನ್ನು ತೆರೆದು, "ಈ ದಾರಿಯಿಂದ ನೀವು ಹೋಗಬಹುದು" ಎಂದನು.

ಯಾಚಕನು ಮರುಮಾತಾಡದೆ ಆ ದಾರಿಯಲ್ಲಿ ಹೊರಟುಹೋದನು.





# ದೇವರ ಚಂದಾ

ಗೋಪಾಲಪುರದ ಜಮೀನ್ದಾರರು ತುಂಬಾ ಜಿಪುಣರೆಂದು ಎಲ್ಲರಿಗೂ ಗೊತ್ತಿತ್ತು. ಜಿಪುಣರಷ್ಟೇ ಅಲ್ಲ, ಹತ್ತು ಮಂದಿಯೊಂದಿಗೆ ಹೊಂದಿ ನಡೆಯುವ ಗುಣವೂ ಅವರಿಗಿಲ್ಲ.

ಆದರೆ ಅವರ ಹೆಂಡತಿ ಗಂಡನಿಗೆ ಪೂರ್ತಿ ವ್ಯತಿರೇಕ ಗುಣದವಳು. ಅದರ ಮೇಲೆ ದೇವರ ಭಕ್ತಿಯೂ ತುಂಬ ಅವಳಲ್ಲಿತ್ತು.

ಒಂದುಸಾರಿ ಊರವರು ಆ ಊರಿನಲ್ಲಿದ್ದ ರಾಮಾಲಯವನ್ನು ಅಭಿವೃದ್ಧಿ ಪಡಿಸಬೇಕೆಂದು ತೀರ್ಮಾನಿಸಿದರು. ಆದಕ್ಕೆ ಬೇಕಾದ ಧನ ಸಂಗ್ರಹಕ್ಕೆ ಶ್ರೀರಾಮನವಮಿಯ ಸಮಯದಲ್ಲೇ ಪ್ರಾರಂಭಿಸಬೇಕೆಂದೂ ನಿಶ್ಚಯಿಸಿದರು.

ಆದುದರಿಂದ ದೇವಾಲಯದ ಧರ್ಮಕರ್ತರು ಮುಂದಾಗಿ ಜಮೀನ್ದಾರರ ಮನೆಗೆ ಕಾರ್ಯದರ್ಶಿಗಳನ್ನು ಕಳುಹಿಸಿದರು. ಜಮೀನ್ದಾರರು ಚಂದಾ ಕೊಡುವರೆಂಬ ನಂಬುಗೆ ಇಲ್ಲದಿದ್ದರೂ, ಅವರ ಹೆಂಡತಿ ದೇವರ ಕಾರ್ಯಕ್ಕಾಗಿ ಅವರಿಂದ ಕೊಡಿಸಬಲ್ಲಳೆಂದು ಅವರಿಗೊಂದು ಆಶೆಯಿತ್ತು. ಹೀಗೆ ಬಂದ ಧರ್ಮಕರ್ತರ ಕಾರ್ಯದರ್ಶಿಗಳು ಚಂದಾ ಕೇಳಿದ ಕೂಡಲೇ ಜಮೀನ್ದಾರರು ಕೊಡಲಾರೆನೆಂದು ಒಮ್ಮೆಗೇ ಹೇಳದೆ, "ಆದಕ್ಕೇನು ಮಹಾ? ಊರೊಳಗೆ ಎಲ್ಲರ ಹತ್ತಿರ ವಸೂಲು ಮಾಡಿ ಆ ಮೇಲೆ ಬನ್ನಿರಲ್ಲ?" ಎಂದರು.

"ತಾವು ಮೊದಲು ಕೊಟ್ಟುಬಿಟ್ಟರೆ ಬೇರೆ ಯಾರೂ ಅಡ್ಡ ಮಾತು ಹೇಳಲಾರರು. ಆದುದರಿಂದ ತಮ್ಮ ಕೈಯಿಂದಲೇ ಪ್ರಾರಂಭ ಹಾಕಿಸಿಬಿಡಬೇಕೆಂಬ ಆಶೆಯಿಂದ ಬಂದೆವು. ಎಷ್ಟಾದರೂ ನಿಮ್ಮ ಕೈಗುಣದ ಮೇಲೆ ನಮಗೊಂದು ನಂಬುಗೆಯಿದೆ ಸ್ವಾಮಿ. ದಯಮಾಡಬೇಕು" ಎಂದರು ಕಾರ್ಯದರ್ಶಿಗಳು.

ಜಮೀನ್ದಾರರು ಇಕ್ಕಟ್ಟಿಗೆ ಸಿಕ್ಕಿ, "ಸರಿ ಸರಿ. ನನ್ನ ಚಂದಾ ಸಾವಿರ ರೂಪಾಯಿ ಬರೆದುಕೊಳ್ಳಿ. ಆದರೆ ಈಗಲೇ ಕೊಡಲು ಸಾಧ್ಯವಿಲ್ಲ. ಎರಡು ದಿನ ತಾಳಿ ಬನ್ನಿ". ಎಂದರು.

"ಹಾಗೇ ಮಾಡಿರಿ ಸ್ವಾಮೀ. ತಮ್ಮ ಮಾತು ಸಾಕು. ಸಾಯಂಕಾಲ ತಾವು ಗ್ರಾಮದ ಕಟ್ಟೆಗೆ ದಯಮಾಡಬೇಕು. ಅಲ್ಲಿ ಎಲ್ಲರನ್ನೂ ಕೂಡಿಸಿ, ಚಂದಾ ವಿಷಯ ಚರ್ಚಿಸಬೇಕೆಂದಿದ್ದೇವೆ. ತಾವು ಸಾವಿರ

ಬಿ. ಅಚ್ಯುತರಾವ್

ರೂಪಾಯಿ ಕೊಟ್ಟ ಹಾಗೆ ಎಲ್ಲರ ಸಮಕ್ಷಮದಲ್ಲಿ ಹೇಳುತ್ತೇವೆ. ಆಮೇಲೆ ಯಾರೂ ಇಲ್ಲವೆನ್ನಲಾರರು" ಎಂದರು ಕಾರ್ಯದರ್ಶಿಗಳು.

ಇದಕ್ಕೆ ಜಮೀನ್ದಾರರೂ ಸಂತೋಷದಿಂದ ಒಪ್ಪಿದರು. ಅವರ ಮಾತುಗಳ ಧೋರಣೆಯಿಂದ ತಾನೇನೂ ಹಣ ಕೊಡಬೇಕಾಗಿಲ್ಲವೆಂದು ಅವರಿಗೆ ತೋರಿತು.

ಆ ಮೇಲೆ ಧರ್ಮಕರ್ತರ ಕಾರ್ಯದರ್ಶಿಗಳು ಜಮೀನ್ದಾರರ ಹೆಂಡತಿಯನ್ನು ನೋಡಿ ತಮ್ಮ ಸಮಾಚಾರವನ್ನು ಹೇಳಿದರು. ತನ್ನ ಗಂಡನು ಕೇವಲ ಮಾತಿನವರೇಹೊರತು ಮಾಡುವವರಲ್ಲವೆಂದು ಅವಳಿಗೆ ಗೊತ್ತಿತ್ತು.

ಈ ದೇವರ ಕಾರ್ಯಕ್ಕೆ ಸಹಾಯಮಾಡಿಸಲೇಬೇಕೆಂದು ಅವಳು ನಿಶ್ಚಯಿಸಿ ಅವರನ್ನು ಕುರಿತು, "ಆ ಸಾವಿರ ರೂಪಾಯಿಯನ್ನು ನಾನೇ ನಿಮಗೆ ಕೊಡುತ್ತೇನೆ. ನೀವು ಮತ್ತೆ ಅವರ ಹತ್ತಿರ ಬಂದು ಕೇಳುವ ಶ್ರಮಪಡುವುದು ಬೇಡ" ಎಂದಳು.

"ಅಮ್ಮಾ, ನಿಮ್ಮ ಸಂಗತಿ ನಮಗೆ ಗೊತ್ತೇ ಇದೆ. ಆದರೆ ಅಯ್ಯನವರು ಎಲ್ಲರ ಸಮಕ್ಷಮದಲ್ಲಿ ಹಣ ಕೊಟ್ಟರೆಹೊರತು ಉಳಿದವರಿಂದ ಚಂದಾಗಳು ಸರಿಯಾಗಿ ಬಾರವು. ಅದಕ್ಕೇ ಯೋಚನೆ ಮಾಡುತ್ತೇವೆ" ಎಂದರು ಕಾರ್ಯದರ್ಶಿಗಳು.

ಅವಳು ಸ್ವಲ್ಪ ಆಲೋಚನೆ ಮಾಡಿ, "ಹಾಗಾದರೆ ಸರಿ. ಸಾಯಂಕಾಲ ಗ್ರಾಮದಕಟ್ಟೆಯಲ್ಲಿ ಅವರ ಕೈಯಿಂದಲೇ ಕೊಡುವ ಹಾಗೆ ನೋಡುತ್ತೇನೆ." ಎಂದು ಅವರು ಏನು ಮಾಡಬೇಕೆಂಬುದನ್ನು ಸೂಕ್ಷ್ಮವಾಗಿ ಹೇಳಿ, "ಈ ಗುಟ್ಟು ಹೊರಗಾಗದಿರಲಿ. ಇನ್ನು ಹೋಗಿ ಬನ್ನಿ" ಎಂದಳು.

ಆ ದಿನ ಸಾಯಂಕಾಲ ಗ್ರಾಮದ ಕಟ್ಟೆಯಲ್ಲಿ ಜಮೀನ್ದಾರರ ಅಧ್ಯಕ್ಷತೆಯಲ್ಲಿ ಊರವರೆಲ್ಲ ಸಮಾವೇಶಿತರಾದರು. ಜಮೀನ್ದಾರ ಮಹನೀಯರು ಸಾವಿರ ರೂಪಾಯಿ ಚಂದಾ ಕೊಡಲು ಒಪ್ಪಿದ್ದಾರೆಂದು ಸಭಾಮುಖದ ಕಾರ್ಯಕರ್ತರು ಪ್ರಕಟಪಡಿಸಿ, ಜಮೀನ್ದಾರರೊಂದಿಗೆ, "ಈ ಕಾರ್ಯಕ್ರಮವು ಪ್ರಪ್ರಥಮವಾಗಿ ತಮ್ಮ ಕೈಯಿಂದ ಬರುವ ಚಂದಾ



ದಿಂದಲೇ ಪ್ರಾರಂಭಿಸಿಬಿಡಿರಿ" ಎಂದರು. ಅಷ್ಟು ಜನರ ಇದಿರಿನಲ್ಲಿ ತನ್ನನ್ನು ಚಂದಾ ಹಾಕುವಂತೆ ಕೇಳುವರೆಂದು ಜಮೀನ್ದಾರರು ಅಂದುಕೊಳ್ಳಲಿಲ್ಲ. ಅವರು ಸ್ವಲ್ಪ ತಬ್ಬಿಬ್ಬಾಗಿ "ಸರಿ. ಮನೆಗೆ ಬಂದು ಪಡೆದುಕೊಳ್ಳಿ" ಎಂದರು ಬಿಂಕದಿಂದ.

"ಅದಕ್ಕೇನು ಬಿಡಿ ಸ್ವಾಮಿ. ಈಗ ತಮ್ಮ ಕೈಯಿಂದ ಜೇಬಿನಲ್ಲಿದ್ದುದೇನೋ ಹಾಕಿ ಬೋಣಿ ಮಾಡಿಬಿಡಿ. ತಾವು ಕೊಡುವಂಥಾದ್ದನ್ನು ಆ ಮೇಲೆ ಸಾವಕಾಶವಾಗಿ ಕೊಡಬಹುದು" ಎಂದರು ಕಾರ್ಯದರ್ಶಿಗಳು.

ತನ್ನ ಜೇಬಿನಲ್ಲಿ ಹತ್ತು ರೂಪಾಯಿಗಿಂತ ಹೆಚ್ಚು ಇರಲಾರದೆಂದು ಜಮೀನ್ದಾರರಿಗೆ ಗೊತ್ತಿತ್ತು. ಆ ಹತ್ತನ್ನೂ ಹಾಕಿಬಿಟ್ಟು ಪೀಡೆ ಕಳೆದುಕೊಳ್ಳಬೇಕೆಂದು ಕೊಂಡು ಜೇಬಿನೊಳಗೆ ಕೈಹಾಕಿದರು. ಯಾವುದೋ ಕಾಗದದ ಕಟ್ಟು ತಗಲಿತು.

ಆಶ್ಚರ್ಯಪಡುತ್ತ ಅದನ್ನು ಮೇಲಕ್ಕೆ ಎತ್ತಿ ನೋಡಿದರು. ಎಲ್ಲವೂ ನೂರು ರೂಪಾಯಿ ನೋಟುಗಳು! ಲೆಕ್ಕಮಾಡಿದಾಗ ಸರಿಯಾಗಿ ಹತ್ತು ಇದ್ದುವು. ಅವರಿಗೆ ಗಂಟಲು ಸಿಕ್ಕಿಕೊಂಡಿತು.

"ಮಹನೀಯರು ಎಲ್ಲವನ್ನೂ ಈಗಲೇ ಕೊಡುವರೆಂದಾಯಿತು! ನಮ್ಮೂರ ಜಮೀನ್ದಾರರದು ಎಷ್ಟಾದರೂ ಉದಾರ ಹಸ್ತ!" ಎಂದು ಕಾರ್ಯದರ್ಶಿಗಳು ಗಟ್ಟಿಯಾಗಿ ಕೂಗಿ, ಚಪ್ಪಾಳೆ ತಟ್ಟಿ, ಸಭೆಯಲ್ಲಿದ್ದವರೆಲ್ಲಾ ಚಪ್ಪಾಳೆ ತಟ್ಟುವಂತೆ ಮಾಡಿದರು.

ಜಮೀನ್ದಾರರು ಸಂಕಟ ಪರಿಸ್ಥಿತಿಯಲ್ಲಿ ಬಿದ್ದು, ಸಾವಿರ ರೂಪಾಯಿಯ ಕಟ್ಟನ್ನು ಮತ್ತೆ ಜೇಬಿಗಿಳಿಸಲೂ ಸಾಧ್ಯವಿಲ್ಲದೆ, ಅವರ ಕೈಗೆ ಕೊಟ್ಟರು. ತರುವಾಯ ಚಂದಾ ವಸೂಲು ಕಾರ್ಯವು ಉತ್ಸಾಹದಿಂದ ಸಾಗಿತು. ತುಂಬಾ ಹಣ ಸೇರಿತು.

ಜಮೀನ್ದಾರರು ಗ್ರಾಮದ ಕಟ್ಟೆಯಿಂದ ನೇರಾಗಿ ಮನೆಗೆ ಹೋಗಿ, ತನ್ನ ಹೆಂಡತಿಯೊಂದಿಗೆ, "ನನ್ನ ಜೇಬಿನಲ್ಲಿ ಹಣದ ಕಟ್ಟು ಹೇಗೆ ಬಂತು? ನೀನೇನಾದರೂ ಇಡಲಿಲ್ಲವಷ್ಟೆ?" ಎಂದು ಕೇಳಿದರು.

"ಅರರೆ! ನಿಮಗೆ ಹೇಳೋಣವೆಂದು ಮಾಡಿ ಮರೆತೇ ಹೋದೆ. ನೋಡಿದಿರಾ! ಆವಾಗ ರೈತರು ಧಾನ್ಯದ ಲೆಕ್ಕದ ಹಣ ಸಾವಿರ ರೂಪಾಯಿ ತಂದು ಕೊಟ್ಟರೆ ಅದನ್ನು ಹಾಗೇ ನಿಮ್ಮ ಜೇಬಿಗೆ ಹಾಕಿಟ್ಟೆ. ಕೆಲಸದ ಗಡಿಬಿಡಿಯಲ್ಲಿ ಹೇಳಲಿಕ್ಕೆ ಮರೆತೆ. ಏನಾಯಿತು? ಹಣ ಲೆಕ್ಕ ಸರಿಯಾಗಿದೆತಾನೇ? ಸಾವಿರದ್ದು ಒಂದು ಕಟ್ಟು ಮಾತ್ರ. ಉಳಿದದ್ದು ಇನ್ನೆರಡು ದಿನದಲ್ಲಿ ತರುತ್ತೇವೆಂದು ಹೇಳಿದ್ದಾರೆ." ಎಂದಳು ಜಮೀನ್ದಾರರ ಹೆಂಡತಿ.

ಜಮೀನ್ದಾರರು "ಹೂಂ. ಸರಿಯಾಗಿಯೇ ಇದೆ, ಇದೆ" ಎಂದು ಮೆಲ್ಲಗೆ ಹೇಳಿ ಆಚೆಗೆ ಹೋದರು.



# ಉಪಾಯ ಕೆಟ್ಟಿತು

ಒಬ್ಬ ಧನಿಕನು ಒಬ್ಬ ಸ್ವರ್ಣಕಾರನ ಹತ್ತಿರ ನಗಗಳನ್ನು ಮಾಡಿಸಲು ಸ್ವಲ್ಪ ಹಣವನ್ನು ಕೊಟ್ಟನು. ನಗಗಳು ತಯಾರಾದುವು. ಧನಿಕನು ಅವನಿಗೆ ಇನ್ನೂ ಎಂಟು ನೂರು ಕೊಡಬೇಕಾಗಿತ್ತು. "ಬರುವ ಮಂಗಳವಾರ ದಿನ ನನ್ನ ತಮ್ಮನೊಂದಿಗೆ ಎಂಟು ನೂರು ಕಳುಹಿಸುತ್ತೇನೆ. ನೀವು ಅವನ ಹತ್ತಿರ ನಗಗಳನ್ನು ಕಳುಹಿಸಿರಿ" ಎಂದು ಧನಿಕ ಹೇಳಿದನು. "ನಿಮ್ಮ ತಮ್ಮನನ್ನು ನಾನು ಅರಿಯೆನು" ಎಂದ ಸ್ವರ್ಣಕಾರ. "ಹಣ ತರುತ್ತಾನಲ್ಲಾ, ಅದೇ ನಿಮಗೆ ಗುರುತು" ಎಂದ ಧನಿಕ.

ಈ ಸಂಭಾಷಣೆ ಕೇಳಿದ ಒಬ್ಬ ಮೋಸಗಾರನು ಮಂಗಳವಾರ ಬೆಳಿಗ್ಗೆ ಎಂಟು ನೂರು ರೂಪಾಯಿ ತಂದು ಸ್ವರ್ಣಕಾರನಿಗೆ ಕೊಟ್ಟು ನಗಗಳನ್ನು ಕೇಳಿದನು. ಆದರೆ ಧನಿಕನು ಸೋಮವಾರ ಸಾಯಂಕಾಲದಲ್ಲೇ ಹಣ ತಂದುಕೊಟ್ಟು ನಗಗಳನ್ನು ತೆಗೆದುಕೊಂಡು ಹೋದುದರಿಂದ ಸ್ವರ್ಣಕಾರನಿಗೆ ನಡೆದ ಮೋಸವು ಅರ್ಥವಾಯಿತು.

ಅವನು ಎಂಟು ನೂರು ರೂಪಾಯಿಗಳನ್ನು ತೆಗೆದುಕೊಂಡು ಒಳಗಿದ್ದ ಗಿಲ್ಟುನಗಗಳು ಕೆಲವನ್ನು ತಂದು ಮೋಸಗಾರನಿಗೆ ಕೊಟ್ಟು ಕಳುಹಿಸಿದನು.





# ಅಗ್ನಿ ಭಯ!

ಒಂದು ದೇಶವನ್ನಾಳುವ ರೂಪರಾಮ ಎಂಬ ರಾಜನು ಎಲ್ಲಾ ವಿಧದಲ್ಲಿ ಒಳ್ಳೆಯ ರಾಜನಾಗಿದ್ದರೂ ಅವನಿಗೆ ಮೂಢವಿಶ್ವಾಸಗಳು ಹೆಚ್ಚಾಗಿತ್ತು. ಅವನಿಗಿರುವ ಈ ಮೂಢವಿಶ್ವಾಸಗಳಿಂದಾಗಿ ಆಗಾಗ ಪ್ರಜೆಗಳಿಗೆ ತೀವ್ರ ಸಂಕಟಗಳುಂಟಾಗುತ್ತಿದ್ದುವು.

ಒಂದು ದಿನ ಬೆಳಂಜಾವದ ಹೊತ್ತಿನಲ್ಲಿ ಆ ರಾಜನಿಗೆ ಕೆಟ್ಟದೊಂದು ಸ್ವಪ್ನ ಬಿದ್ದಿತು. ಅದರಲ್ಲಿ ಅವನಿಗೆ ಅಗ್ನಿದೇವನು ಕಂಡುಬಂದನು. ಜ್ವಾಲೆಯನ್ನುಗುಳುವ ಅಗ್ನಿ ದೇವನು ಉರಿಗಣ್ಣುಗಳಿಂದ ರಾಜಭವನವನ್ನು ತೀವ್ರವಾಗಿ ನೋಡುತ್ತಿರಲು, ರಾಜಭವನವು ಭಗ್ಗನೆ ಹೊತ್ತಿಕೊಂಡು ಉರಿಯ ತೊಡಗಿತು

"ಬೆಂಕಿ ! ಬೆಂಕಿ ! ಉರಿ ! ಉರಿ ! ಬನ್ನಿ ! ರಕ್ಷಿಸಿರೋ !" ಎಂದು ರಾಜನು ದೊಡ್ಡ ದನಿಯಿಂದ ಕೂಗಿಕೊಂಡನು.

ಎಲ್ಲರೂ ಓಡುತ್ತೋಡುತ್ತಾ ಬಂದರು. ಮೊದಲು ರಾಜನಿಗೆ ಅವರೆಲ್ಲಾ ಏಕೆ ಓಡಿ ಬಂದರೆಂದು ಅರ್ಥವಾಗಲಿಲ್ಲ. ಎಲ್ಲಿಯೂ ಬೆಂಕಿ ಕಾಣದಿರುವುದನ್ನು ನೋಡಿ ಸುಮ್ಮನೆ ಕಣ್ಣುಬಿಟ್ಟು ನಿಂತುಕೊಂಡನು. ಅವನು ಕೂಗಿಕೊಂಡ ಸಂಗತಿಯನ್ನು ಓಡಿ ಬಂದವರು ಹೇಳಿದ ಮೇಲೆಯೇ ಅವನಿಗೆ ತನ್ನ ಕೆಟ್ಟ ಸ್ವಪ್ನವು ನೆನಪಿಗೆ ಬಂದಿತು. ಆಗ ಅವನು ಮಂತ್ರಿ ಪುರೋಹಿತರೊಂದಿಗೆ ಆ ಸ್ವಪ್ನದ ಸಂಗತಿಯನ್ನು ಹೇಳಲು, "ಅಷ್ಟೇ ತಾನೇ? ಅದನ್ನೇನೂ ಲಕ್ಷ್ಯ ಮಾಡಬೇಕಾಗಿಲ್ಲ ಪ್ರಭುಗಳೇ" ಎಂದರು.

ಆದರೆ ರಾಜನಿಗೆ ಅವರ ಹಾರಿಕೆಯ ಮಾತು ಹಿಡಿಸಲಿಲ್ಲ. "ಬೆಳಂಜಾವುದಲ್ಲಿ ಬಿದ್ದ ಸ್ವಪ್ನವು ನಿಜವೇ ಆಗುತ್ತದೆ. ಇದನ್ನು ಉಪೇಕ್ಷಿಸಬಾರದು. ತಕ್ಕ ಎಚ್ಚರಿಕೆ ಬೇಕೇಬೇಕು" ಎಂದು ಹೇಳಿ ರಾಜನು ಭವನದಲ್ಲೆಲ್ಲಿಯೂ ಯಾರೂ ಬೆಂಕಿಯನ್ನೂ ದೀಪವನ್ನೂ ಉರಿಸಬಾರದೆಂದು ಕಟ್ಟಪ್ಪಣೆಯನ್ನು ಜಾರೀ ಮಾಡಿದನು.

ರಾಜಭವನದಲ್ಲಿರುವವರಿಗೆಲ್ಲ ಎಲ್ಲೋ ದೂರದಲ್ಲಿ ಅಡಿಗೆ ತಯಾರಾಗಿ ಬಂದಿತು. ಆದರಿಂದಾಗಿ ಬಿಸಿಬಿಸಿ ಊಟ ಮಾಡುವ ಅದೃಷ್ಟ ಅವರಿಗೆ ಇಲ್ಲದಾಯಿತು. ರಾತ್ರಿಯಲ್ಲಿ ಭವನದೊಳಗೆಲ್ಲಾ ಗಾಢಾಂಧಕಾರವೇ ಆಕ್ರಮಿಸಿ ಅತ್ತಿತ್ತ ತಿರುಗಾಡುವವರು ತಲೆ ತಲೆ ತಾಗಿಸಿಕೊಂಡೂ, ಬಿದ್ದೆದ್ದು ಅವಯವ ಉಳುಕಿಸಿಕೊಂಡೂ ಕಷ್ಟಪಡತೊಡಗಿದರು

ಈ ದುರ್ದೆಸೆಯಿಂದ ರಾಜಭವನವನ್ನೂ ಅದರಲ್ಲಿ ವಾಸ ಮಾಡುವವರನ್ನೂ ಹೇಗೆ ಕಾಪಾಡುವುದೆಂಬುದು ಸಭಿಕರಿಗೆಲ್ಲ ದೊಡ್ಡ ಸಮಸ್ಯೆಯಾಯಿತು. ಆಸ್ಥಾನದ ಐಂದ್ರಜಾಲಿಕನಾದ ಸೋಮನಾಥನು ಒಂದು ದಿನ ಆಸ್ಥಾನ ಪುರೋಹಿತನೊಡನೆ ಮಾತಾಡಿ, ತನ್ನದೊಂದು ಪಥಕವನ್ನು ಹೀಗೆ ಹೇಳಿದನು :

"ಪರೇಶನೆಂಬ ನನ್ನ ಚಿಕ್ಕ ತಂದೆ ನೆರೆರಾಜ್ಯದಲ್ಲಿದ್ದಾರೆ. ಅವರೂ ಇಂದ್ರಜಾಲ ವಿದ್ಯೆಯಲ್ಲಿ ಪ್ರವೀಣರೇ, ಅದರ ಮೇಲೆ ಅಗ್ನಿಯನ್ನು ವಶಪಡಿಸಿಕೊಂಡವರು. ಅವರನ್ನು ಕರೆಯಿಸಿ ಮಹಾ ರಾಜರಿಗೆ ಪರಿಚಯ ಮಾಡಿಸಿಬಿಡೋಣ. ಅವರಿಂದ ಇಂದ್ರಜಾಲದ ಮೂಲಕವಾಗಿ, ಮಹಾರಾಜರಿಗೆ ನಂಬುಗೆ ಹುಟ್ಟಿಸಿ, ರಾಜಭವನದೊಳಗೆ ಬೆಳಕು ಬರುವಂತೆ ಮಾಡಲು ಸಾಧ್ಯವಿದೆ."

ಸೋಮನಾಥನು ಹೇಳಿದಂತೆ ಅವನ ಚಿಕ್ಕಪ್ಪ ಪರೇಶನನ್ನು ಕರೆಯಿಸಲಾಯಿತು. ಅದಕ್ಕೆ ಮೊದಲೇ ಆಸ್ಥಾನದ ಪುರೋಹಿತನು ರಾಜನಿಗೆ ಪರೇಶನ ಅಗ್ನಿ ವಶೀಕರಣ ಶಕ್ತಿಯನ್ನು ಕುರಿತು ಸಾಕಷ್ಟು ಹೇಳಿದ್ದನು. ಅಂತಹ ಪರೇಶನು ಒಂದು ರಾಜನ ಮುಂದೆ ತನಗಿರುವ ಶಕ್ತಿಯನ್ನು ಪ್ರತ್ಯಕ್ಷವಾಗಿ ತೋರಿಸಲು ಉಪಕ್ರಮಿಸಿದನು.

ಅವನು ತನ್ನ ಚೀಲದೊಳಗಿನಿಂದ ಒಂದು ಗಾಜಿನ ಚಿಮಣಿಯನ್ನು ತೆಗೆದನು. ಅದರ ಮೇಲಿನ ಭಾಗವು ಎರಡು ಅಂಗುಲ ವ್ಯಾಸವಿದ್ದಿತು. ಮೇಜಿಯ ಮೇಲೆ ಒಂದು ಮಯಣದ ಬತ್ತಿಯನ್ನು ಬೆಳಗಿಸಿಟ್ಟು ಅದರ ಮೇಲೆ ಚಿಮಣಿಯನ್ನು ಇರಿಸಿದನು. ಮಯಣದಬತ್ತಿ ಸ್ವಲ್ಪ ಹೊತ್ತು ಉರಿದು ಆರಿಹೋಯಿತು. ಚಿಮಣಿಯನ್ನು ತೆಗೆದು ಮತ್ತೆ ಮಯಣದ ಬತ್ತಿಯನ್ನು ಬೆಳಗಿಸಿ, ಮತ್ತೆ ಚಿಮಣಿಯನ್ನು ಅದರ ಮೇಲಿಟ್ಟನು. ಮಯಣದಬತ್ತಿ ಮತ್ತೆ ಆರಿಹೋಯಿತು.

ಆಮೇಲೆ ಪರೇಶನು ಎಲ್ಲರನ್ನೂ ನೋಡಿ, "ಈಗ ಬೆಳಗುವ ಮಯಣದಬತ್ತೀ ಮೇಲೆ ಚಿಮಣಿಯನ್ನಿಟ್ಟು ದೀಪ ಬೆಳಗಿಕೊಂಡಿರುವಂತೆ ಮಾಡುವ



ಅಗ್ನಿ ವಶೀಕರಣ ಗೊತ್ತಿದ್ದವರಿಗೆ ನೂರು ಚಿನ್ನದ ಮೊಹರೀ ಕೊಡುತ್ತೇನೆ!" ಎಂದನು.

ಯಾರೂ ಮಾತಾಡಲಿಲ್ಲ. "ನೋಡುವೆಯೇನು? ಸೋಮನಾಥ್?" ಎಂದು ರಾಜನು ಸೋಮನಾಥನನ್ನು ನೋಡಿದನು.

"ಇದು ಇಂದ್ರಜಾಲ ವಿದ್ಯೆಯಲ್ಲ ಪ್ರಭೂ! ದೈವಾನುಗ್ರಹವಿಲ್ಲದೆ ಅಗ್ನಿ ವಶೀಕರಣ ವಿದ್ಯೆಸಾಧ್ಯವಾಗದು. ಆ ದೊಡ್ಡ ಮನುಷ್ಯರಿಗೇ ಆ ಶಕ್ತಿ ಇರಬಹುದು. ಅವರೇ ಮಾಡಲಿ, ನೋಡೋಣ" ಎಂದ ಸೋಮನಾಥ.

"ಹೌದು. ನನಗೆ ಆ ಶಕ್ತಿ ಇದೆ. ಇಲ್ಲದಿದ್ದರೆ ನಿಮ್ಮೊಡನೆ ಪಂದ್ಯ ಒಡ್ಡುತ್ತಿದ್ದೆನೇ? ನಾನು ಹನ್ನೆರಡು ವರ್ಷ ಅಗ್ನಿಯನ್ನು ಆರಾಧಿಸಿ ಅಗ್ನಿಮಂತ್ರ ಸಾಧಿಸಿದ್ದೇನೆ. ಇದೋ ನೋಡಿ. ಈ ತಗಡಿನ ಮೇಲೆ ಆ ಮಂತ್ರ ಕೊರೆಯಲಾಗಿದೆ." ಎಂದು ಪರೇಶನು ತನ್ನ ಚೀಲದಿಂದ ಲೋಹದ ಒಂದು ತೆಳ್ಳಗಿನ ತಗಡನ್ನು ತೆಗೆದನು. ಅದರಲ್ಲಿ ಏನೋ ವಿಚಿತ್ರವಾದ ಅಕ್ಷರಗಳು ಕೊರೆಯಲ್ಪಟ್ಟಿದ್ದುವು. ಆ ತಗಡು ಪತಾಕೆಯ ಆಕಾರದಲ್ಲಿದ್ದಿತು.

ಅದನ್ನು ಅವನು ಚಿಮಣಿಯ ಮೇಲು ಭಾಗದಲ್ಲಿಟ್ಟು, ತಗಡು ಒಳಬದಿಗೆ ನೇತಾಡುವಂತೆ ಮಾಡಿ, ಮಯಣದ ಬತ್ತಿಯನ್ನು ಬೆಳಗಿಸಿದನು.

ಈಸಾರಿ ಮಯಣದಬತ್ತಿ ಆರಲೇ ಇಲ್ಲ. ನಿಶ್ಚಲವಾಗಿ ಎಷ್ಟು ಹೊತ್ತಾದರೂ ಬೆಳಗಿಕೊಂಡಿತ್ತು. ಆದರೆ ಆ ತಗಡನ್ನು ತೆಗೆದಕೂಡಲೇ ಮಯಣದಬತ್ತಿ ಆರಿಹೋಯಿತು.

ಇದರಿಂದ ಮಂತ್ರಾಕ್ಷರಗಳುಳ್ಳ ತಗಡಿನ ಮಹಿಮೆ ಸ್ಪಷ್ಟವಾಯಿತು. ರಾಜನೂ ಅವನ ಅನುಚರರೂ ಅದನ್ನು ನೋಡಿ ಒಪ್ಪಿ ತಲೆದೂಗಿದರು. ಪರೇಶನು ಅಂತಹ ಅನೇಕ ತಗಡಿನ ತುಂಡುಗಳನ್ನು ತೆಗೆದು ರಾಜನಿಗೆ ಕೊಟ್ಟು, ಅಗ್ನಿ ಎಲ್ಲೆಲ್ಲಿದೆಯೋ ಅಲ್ಲಲ್ಲಾ ಅವುಗಳನ್ನಿಟ್ಟರೆ ಅಗ್ನಿಯ ಭಯವೇ ಇಲ್ಲವೆಂದು ಪ್ರಮಾಣವಾಗಿ ಹೇಳಿದನು.

ಆಮೇಲೆ ರಾಜಭವನದೊಳಗಿನ ಜೀವನವು ಯಥಾ ಸ್ಥಿತಿಗೆ ಬಂದಿತು. ಇಷ್ಟೆಲ್ಲಾ ಇಂದ್ರಜಾಲ ನಡೆಸಿದವನು ಸೋಮನಾಥನೇ. ಚಿಮಣಿಯೊಳಗೆ ಮಯಣದಬತ್ತಿ ಬೆಳಗುವಾಗ ಗಾಳಿಯಲ್ಲಿಯ ಪ್ರಾಣವಾಯು ಮುಗಿದು ಅದು ನಂದಿ ಹೋಗುವುದು ಪ್ರಕೃತಿ ಧರ್ಮ. ಪರೇಶನು ಆ ಚಿಮಣಿಯ ಮೇಲು ಭಾಗವನ್ನು ತಗಡಿನಿಂದ ಎರಡಾಗಿ ವಿಭಜಿಸಿದಾಗ ಪ್ರಾಣವಾಯು ಒಂದರ್ಧದಲ್ಲಿ ಮೇಲೆ ಹೋಗುತ್ತ, ಎರಡನೇ ಅರ್ಧದಿಂದ ಹೊಸಗಾಳಿ ಒಳಗೆ ಪ್ರವೇಶಿಸುತ್ತಿರಲು, ಮಯಣದಬತ್ತಿ ಅವಿಚ್ಛಿನ್ನವಾಗಿ ಬೆಳಗಿಕೊಂಡಿರುತ್ತದೆ.





# ಚಿನ್ನನ ಚಿನ್ನ

ಚೀನಾ ದೇಶದಲ್ಲಿ ಹೊಯಾಂಗ್‌ಹು ನದಿಯ ಪ್ರಾಂತದಲ್ಲಿ ಒಂದು ಇದ್ದಿಲು ಗನಿ ಇದ್ದಿತು. ಅದೊಂದು ಚಿಕ್ಕ ಇದ್ದಿಲು ಗನಿ. ಅದರಲ್ಲಿ ಪಿಂಗ್ ಮತ್ತು ಚಿನ್ ಎಂಬ ಇಬ್ಬರು ಕಾರ್ಮಿಕರು ಇದ್ದಿಲು ಅಗೆದು ತೆಗೆದು ಪಟ್ಟಣಕ್ಕೆ ಒಯ್ದು ಮಾರಾಟ ಮಾಡಿ ಜೀವನ ನಡೆಸಿಕೊಂಡಿದ್ದರು.

ಒಂದು ದಿನ ಅವರು ಇದ್ದಿಲು ಗನಿಯ ಒಂದೊಂದು ಭಾಗದಲ್ಲಿ ಕೆಲಸ ಮಾಡುತ್ತಿದ್ದಾಗ ಬಂಡೆಯಷ್ಟು ದೊಡ್ಡದೊಂದು ಇದ್ದಿಲು ಹೆಂಟೆ ಪಿಂಗನ ಕಾಲ ಮೇಲೆ ಬಿತ್ತು. ಪಿಂಗ್‌ನ ಎರಡು ಕಾಲುಗಳೂ ಜಜ್ಜಿಹೋದುವು.

ಚಿನ್ ಅವನನ್ನು ತನ್ನ ಭುಜದ ಮೇಲೆ ಹೊತ್ತುಕೊಂಡು ಪಟ್ಟಣಕ್ಕೆ ಕೊಂಡೊಯ್ದು ಚಿಕಿತ್ಸೆ ನಡೆಯಿಸಿದನು. ಪಿಂಗನ ಎರಡು ಕಾಲುಗಳನ್ನೂ ಕಡಿದು ಕಟ್ಟು ಕಟ್ಟಿದರು. ಹೀಗೆ ಪಿಂಗ್ ಕುಂಟನಾಗಿ, ಅವನಿಗೆ ದಿನ ದೂಡುವುದೇ ಕಷ್ಟವಾಯಿತು.

ಒಂದು ದಿನ ಅವನು ಚಿನ್ನನೊಂದಿಗೆ, "ನನ್ನನ್ನು ಒಮ್ಮೆ ಆ ಇದ್ದಿಲು ಗನಿಗೆ ತೆಗೆದುಕೊಂಡು ಹೋಗು. ನನ್ನನ್ನು ಹೀಗೆ ದಟ್ಟ ದರಿದ್ರನನ್ನಾಗಿ ಏಕೆ ಮಾಡಿದೆಯೆಂದು ಗನಿ ದೇವತೆಯನ್ನು ಕೇಳುತ್ತೇನೆ" ಎಂದನು. ಚಿನ್ ಅವನನ್ನು ಗನಿಗೆ ಕೊಂಡೊಯ್ದು ಸೇರಿಸಿದನು. ಪಿಂಗ್ ನೆಲದ ಮೇಲೆ ಬಿದ್ದು ಗಟ್ಟಿಯಾಗಿ, "ಓ ಅಮ್ಮಾ! ಗನಿ ದೇವತೆಯೇ! ನಾನೂ ನನ್ನ ಹೆಂಡತಿಯೂ ಹೇಗೆ ಬದುಕಬೇಕು? ನನ್ನ ಗತಿ ಏನು? ನೀನೇ ಹೇಳು!" ಎಂದು ಕೂಗಿ ಕೇಳಿದನು.

ಗನಿಯೊಳಗಿನಿಂದ ಯಾವ ಸುದ್ದಿಯೂ ಕೇಳಿಬರಲಿಲ್ಲ. ಆದರೆ ಆಕಸ್ಮಾತ್ತಾಗಿ ಪಿಂಗನ ಸಮೀಪದಲ್ಲಿ ಚಿಕ್ಕದೊಂದು ಮೂಟೆ ಬಿದ್ದಿತು. ಪಿಂಗ್ ಅತ್ಯಾತುರದಿಂದ ಅದನ್ನು ಬಿಡಿಸಿ ನೋಡಿದನು. ಅದರಲ್ಲಿ ಚಿನ್ನದ ನಾಣ್ಯಗಳಿದ್ದುವು. "ಗನಿದೇವಿ ಬದುಕಿಸಿದಳು." ಎಂದು ಪಿಂಗ್ ಸಂತೋಷಪಟ್ಟನು.

ಅದುವರೆಗೆ ಪಿಂಗನ ಮೇಲೆ ಸಹಾನುಭೂತಿಯಿಂದಿದ್ದ ಚಿನ್ ಅಂದಿನಿಂದ ಪಿಂಗನ ಮೇಲೆ ಅಸೂಯೆಯಿಂದ ಉರಿಯತೊಡಗಿದನು. ಪಿಂಗನಿಗೆ ಕಾಲುಹೋದರೆ ಏನಾಯಿತೀಗ? ಶ್ರಮಪಡದೆ ಜೀವಿಸುವ ಮಾರ್ಗ ಸಿಕ್ಕಿತಲ್ಲ!

ಮರುದಿನ ಚಿನ್ ಇದ್ದಿಲು ಗನಿಗೆ ಹೋದಕೂಡಲೇ ಗುದ್ದಲಿಯನ್ನು ಕೆಳಗೆ ಹಾಕಿ "ತಾಯಿ! ಗನಿ

ಎಂ. ವಿ. ಸತ್ಯನಾರಾಯಣ

ದೇವತೆಯೇ ! ನನ್ನ ಜೀವನವು ಸುಖವಾಗಿ ಕಳೆಯಲು ದಾರಿ ಹಾಕಿ ಕೊಡಮ್ಮಾ! ಕೊಡು, ಕೊಡು" ಎಂದು ಪದೇ ಪದೇ ಕೂಗತೊಡಗಿದನು.

ಚಿನ್ನನ ಎದುರಿನಲ್ಲಿ ಗನಿದೇವತೆ ಪ್ರತ್ಯಕ್ಷಳಾಗಿ, "ಚಿನ್, ನಿನಗೇನು ಕಡಿಮೆ? ಕಷ್ಟಪಟ್ಟು ಬದುಕುವ ಸಾಮರ್ಥ್ಯ ನಿನಗಿದೆಯಲ್ಲಾ?" ಎಂದು ಕೇಳಿದಳು.

"ಎಷ್ಟುಕಾಲ ಹೀಗೆ ಕಷ್ಟಪಟ್ಟೇನು? ನನಗೂ ಏನಾದರೂ ನಿಧಿ ಸಿಗುವ ಹಾಗೆ ಮಾಡಬಾರದೇ? ನಿನ್ನ ಉಪಕಾರ ಮರೆಯಲಾರೆ" ಎಂದನು ಚಿನ್.

"ಪಿಂಗನ ಹಾಗೆ ನೀನು ಕೂಡಾ ಏನನ್ನಾದರೂ ಕಳೆದುಕೊಳ್ಳುವೆಯಾ?" ಎಂದು ಗನಿದೇವತೆ ಕೇಳಿದಳು. ಚಿನ್ ಅದಕ್ಕೆ ಒಪ್ಪಿಕೊಂಡನು. "ಹಾಗಾದರೆ ಸರಿ. ಮನೆಗೆ ಹೋಗು. ನಿನ್ನ ಮಗನನ್ನು ಕರೆದು ಅವನನ್ನೇ ದಿಟ್ಟಿಸಿ ನೋಡು. ಅವನಿಗೆ ಮೇಲಿಂದ ಮೇಲೆ ಇಕ್ಕಿಡು ಬರತೊಡಗುತ್ತದೆ. ಒಂಬತ್ತನೇ ಇಕ್ಕಿಡು ಬಂದ ಮೇಲೆ ಅವನು ನಿನ್ನ ಮಗನಾಗಿರುವುದಿಲ್ಲ. ಅವನನ್ನು ತಂದು ನನಗೆ ಒಪ್ಪಿಸಿಬಿಡು" ಎಂದಳು ಗನಿದೇವತೆ.

ಚಿನ್ನನಿಗೆ ಇನ್ನೂ ಸಂತಾನ ಹುಟ್ಟಬಹುದು. ಆದರೆ ಧನರಾಶಿ ಸಿಗಲು ಇದರ ಹೊರತು ಬೇರೆ ಮಾರ್ಗವೇನಿಲ್ಲ. ಚಿನ್ ಮನೆಗೆ ಬಂದನು. ಮಗ ಮನೆ ಮುಂದೆ ಆಟವಾಡಿಕೊಂಡಿದ್ದ. ಚಿನ್ ಅವನನ್ನು ಬಳಿಗೆ ಕರೆದು ಅವನನ್ನೇ ದಿಟ್ಟಿಸಿ ನೋಡತೊಡಗಿದ. ಚಿನ್ನನ ಮಗನಿಗೆ ಇಕ್ಕಿಡು ಬರತೊಡಗಿತು. ಐದು ಇಕ್ಕಿಡು ಮೇಲಿಂದ ಮೇಲೆ ಬಂದಿತು. ಆಗ ತನ್ನ ಮಗನ ಮುಖದಲ್ಲಿ ಅಪ್ಪಟ ಬಂಗಾರದ ಛಾಯೆ ಬರುವುದನ್ನು ನೋಡಿದನು. ಆಗ ತನ್ನ ಮಗನೇ ತನ್ನ ನಿಧಿ ಎಂಬ ಮಿಂಚು ಅವನ ತಲೆಯಲ್ಲಿ ಮಿಂಚಿತು. ಚಿನ್ ಮಗನ ಕಡೆಗೆ ನೋಡುವುದನ್ನು ಬಿಟ್ಟು, ಗನಿಯ ಕಡೆಗೆ ಓಡಿದನು.

ಚಿನ್ನನ ಮಗನಿಗೆ ಇಕ್ಕಿಡು ಬರುವುದು ನಿಂತಿತು. ಮತ್ತೆ ತನ್ನ ಆಟಕ್ಕೆ ಓಡಿಹೋಗಿ ಇತರ ಹುಡುಗರೊಂದಿಗೆ ಕೂಡಿದನು.

ಚಿನ್ನನನ್ನು ನೋಡಿ ಗನಿದೇವತೆ ನಗಾಡುತ್ತ, "ಹುಚ್ಚಾ! ನಿನಗೆ ಸಂಪತ್ತು ಕೊಡುವ ಸಾಮರ್ಥ್ಯ ನನಗಿದ್ದರೆ ಪಿಂಗನ ಕಾಲು ಮುರಿಯದಂತೆ ನೋಡಿಕೊಳ್ಳುತ್ತಿದ್ದೆನಷ್ಟೆ? ಯಾವನೋ ಈ ಗನಿಯನ್ನು ಒಂದು ವರ್ಷದವರೆಗೆ ಗುತ್ತಿಗೆಗೆ ಪಡೆದುಕೊಂಡು, ನನಗೆ ಲಂಚವಾಗಿ ಆ ನಾಣ್ಯದ ಚೀಲ ಬಿಸಾಡಿದ್ದಾನೆ. ಅದು ಪಿಂಗನಿಗೆ ಸಿಕ್ಕಿತು. ಅವನ ಅದೃಷ್ಟ ಅದು! ಚಿನ್, ನಿನ್ನ ಬಾಹು ಖಂಡಗಳಲ್ಲೇ ನಿನ್ನ ನಿಧಿ ಅಡಗಿದೆ. ಚಿನ್ನದಂತಹ ನಿನ್ನ ಮಗನು ಮುದಿತನದಲ್ಲಿ ನಿನಗೆ ಆಧಾರವಾಗುತ್ತಾನೆ. ಹೋಗಿನ್ನು!" ಎಂದು ಹೇಳಿ ಅದೃಶ್ಯಳಾದಳು.



# ಭ್ರಮಿಸಿದ್ದು ಯಾರು ?



**ಕೋ**ಟಪ್ಪ ದಾರೀ ಹಿಡಿದುಹೋಗುತ್ತಿದ್ದಾಗ ಕೋಗಿಲೆ ಕೂಗುವುದನ್ನು ಕೇಳಿದನು. ಅದು ಆಚೆಯ ಬೀದಿಯ ಬದಿಯ ಆಲಗಮರದ ಮೇಲಿಂದ ಕೂಗಿದ್ದೆಂದು ಅವನಿಗೆ ತಿಳಿಯಿತು.

ಕೂಡಲೇ ಕೋಟಪ್ಪನಿಗೆ ಆ ಕೋಗಿಲೆಯನ್ನು ಭ್ರಮೆಗೊಳಿಸಬೇಕೆಂದು ತೋರಿತು. ಕೋಗಿಲೆಯಂತೆಯೇ ತಾನೂ ಕೂಗಿದನು. ಕೋಟಪ್ಪ ಕಂಠ ಒಣಗಿಹೋಗುವವರೆಗೂ ಕೋಗಿಲೆಯನ್ನು ಭ್ರಮೆಗೊಳಿಸಿ, ಮತ್ತೆ ಸಾಧ್ಯವಿಲ್ಲದೆ ಮುಂದಕ್ಕೆ ನಡೆದುಹೋದನು.

ಆ ದಾರಿಯ ಕೊನೆಯಲ್ಲಿ ಅವನ ಮಿತ್ರ ಬಾಳಪ್ಪನಿರುವುದನ್ನು ನೋಡಿದನು. ಕೋಟಪ್ಪ ಅವನೊಂದಿಗೆ ತಾನು ಕೋಗಿಲೆಯನ್ನು ಬಹಳ ಹೊತ್ತು ಹೇಗೆ ಗೋಳುಹೊಯಿಸಿಬಿಟ್ಟೆನೆಂಬುದನ್ನು ಹೇಳಿಕೊಂಡನು. ಅದನ್ನು ಕೇಳಿ ಬಾಳಪ್ಪ, "ಅರೆ, ನೀನಾ ? ಎಂಥ ಕೆಲಸ ಮಾಡಿದೆಯಲ್ಲಾ ! ನಿನ್ನ ಕೂಗು ಕೇಳಿ ನಿಜವಾಗಿ ಕೋಗಿಲೆಯೇ ಅಂದುಕೊಂಡು ಅಲ್ಲಿದ್ದ ಆಲದ ಮರದ ಹತ್ತಿರ ನಿಂತು ಕೂಗಿದವನು ನಾನೇ !" ಎಂದನು.



# ಮಾಸ್ತರ್ರ ದುರವಸ್ಥೆ

ಪ್ರಸಿದ್ಧ ಖಲೀಫನಾದ ಹಾರೂನ್ ಅಲ್ ರಷೀದ್ ಬಾಗ್ದಾದನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ ಒಂದು ಪಾಠಶಾಲೆಯಲ್ಲಿ ಒಬ್ಬರು ಮಾಸ್ತರಿದ್ದರು. ಅವರ ಹತ್ತಿರ ಇಪ್ಪತ್ತನಾಲ್ಕು ಹುಡುಗರು ಪಾಠ ಹೇಳಿಸಿಕೊಳ್ಳುತ್ತಿದ್ದರು.

ಈ ಮಾಸ್ತರ್ರದು ಬಹಳ ಕಠಿನ ಸ್ವಭಾವ. ಸಾಯಂಕಾಲವಾದರೂ ಹುಡುಗರನ್ನು ಆಡಲು ಬಿಡದೆ, ಕತ್ತಲಾದ ಮೇಲೆ ಒಂದು ಗಂಟೆ ಹೊತ್ತಿನವರೆಗೂ ಓದಿಸಿ ಆಮೇಲೆ ಮನೆಗೆ ಹೋಗಲು ಬಿಡುತ್ತಿದ್ದರು. ಮಾಸ್ತರ್ರ ಕಾಠಿಣ್ಯವೇ ಅವರ ಕಷ್ಟಗಳಿಗೂ ಕಾರಣವಾಯಿತು.

ಒಂದು ದಿನ ಆ ಮಾಸ್ತರು ಆಗತಾನೇ ಪಾಠವನ್ನು ಪ್ರಾರಂಭಿಸಲಿರುವಾಗ, ಇಪ್ಪತ್ತನಾಲ್ಕು ವಿದ್ಯಾರ್ಥಿಗಳೂ ಒಮ್ಮೆಗೇ ಎದ್ದು ನಿಂತು, "ಇದೇನು ಮಾಸ್ತರೇ! ಇವತ್ತು ನಿಮ್ಮ ಮುಖ ಹಳದಿ ಬಣ್ಣವಾಗಿದೆಯಲ್ಲಾ? ಯಾಕೆ ದೇವ್ರೇ? ಸೌಖ್ಯವಿಲ್ಲವೇ?" ಎಂದು ಕೇಳಿದರು.

ಮಾಸ್ತರರು "ಶೂಶೂ" ಎಂದು ಪಾಠವನ್ನು ಮುಂದುವರಿಸುತ್ತಲೇ ಇದ್ದರು. "ಹೌದು ಹೌದು! ಮಾಸ್ತರರಿಗೆ ಏನೋ ಆಗಿದೆ!" ಎಂದರು ಪುನಃ ಹುಡುಗರು. ಮಾಸ್ತರು ಆ ಹುಡುಗರ ಮಾತನ್ನು ಲಕ್ಷ್ಯಕ್ಕೆ ತಾರದೆ ಎಲ್ಲರನ್ನೂ ನೋಡಿದರು. ಅವರಿಗೆ ತಮ್ಮ ಶರೀರದಲ್ಲಿ ರೋಗವಿರುವಂತೆ ತೋರಲೂ ಇಲ್ಲ. ಆದುದರಿಂದ ಹುಬ್ಬು ಗಂಟುಮಾಡಿ, "ಶೂ! ಪಾಠವನ್ನು ಓದಿರಿ ನೋಡುವಾ! ನಾನು ಪಾಠ ಮಾಡುವಾಗ ಗಮನಿಸುವುದನ್ನು ಬಿಟ್ಟು ಸಿಕ್ಕಾಬಟ್ಟೆ ಮಾತಾಡುವಿರಾ? ಪೋಕ್ರಿಗಳೇ!" ಎಂದು ಗದರಿಸಿದರು. ಆದರೆ ಆ ವಿದ್ಯಾರ್ಥಿಗಳಲ್ಲಿ ದೊಡ್ಡ ಹುಡುಗ ಮಾಸ್ತರ ಸಮೀಪ ಬಂದು ಗಾಬರಿಯಾದವನಂತೆ, "ಅಲ್ಲಾನ ಸಹಾಯವಿರಲಿ ಮಾಸ್ತರೇ! ನಿಮ್ಮ ಮುಖ ತುಂಬ ಹಳದಿಯಾಗಿದೆ. ನಿಮಗೆ ಆರೋಗ್ಯ ಚೆನ್ನಾಗಿಲ್ಲದಿದ್ರೆ, ಶಾಲೆ ಪಾಠ ನಾನು ನೋಡಿಕೊಳ್ಳುತ್ತೇನೆ ಮಾಸ್ತರೇ. ನೀವು ವಿಶ್ರಾಂತಿ ತೆಗೆದುಕೊಳೋದು ಒಳ್ಳೇದು ದೇವರೇ." ಎಂದನು.

ಉಳಿದ ಹುಡುಗರೆಲ್ಲಾ ತಮ್ಮ ಮಾಸ್ತರು ಬದುಕುತ್ತಾರೋ ಇಲ್ಲವೋ ಎಂಬಷ್ಟು ತಳಮಳವನ್ನು ಮುಖದಲ್ಲಿ ತೋರಿಸಿಕೊಂಡಿದ್ದರು. ಅದನ್ನೆಲ್ಲ ನೋಡಿದ ಮೇಲೆ ಮಾಸ್ತರ್ರಿಗೆ ಸಂದೇಹವಾಯಿತು. ನಿಜ

ವಾಗಿಯೂ ತನಗೇನೋ ಆಗಿರಬೇಕೆಂದೂ, ವ್ಯಾಧಿಯ ಲಕ್ಷಣ ಹೊರಗೆ ಗೊತ್ತಾಗದಿರುವಂಥ ರೋಗವಾದರೆ ಅದು ತುಂಬ ಅಪಾಯಕಾರಿಯೆಂದೂ ಅನಿಸಿತು. ಅವರು ಕೂಡಲೇ ಕುಳಿತ ಸ್ಥಳದಿಂದ ಎದ್ದು ನಿಂತು, "ಸರಿಯಪ್ಪ, ಇವತ್ತು ನೀನೇ ನೋಡಿಕೊ" ಎಂದು ಶಾಲೆಯನ್ನು ದೊಡ್ಡ ಹುಡುಗನಿಗೆ ಒಪ್ಪಿಸಿ, ಮನೆಗೆ ಹೋಗಿ ಮಲಗಿದರು. ಹಾಗೆಯೇ ತನ್ನ ಹೆಂಡತಿಯನ್ನು ಕರೆದು, ಅರಸಿನ ಕಾಮಾಲೆ ರೋಗಕ್ಕೆ ಏನಾದರೂ ಕಷಾಯ ಕುದಿಸಿಕೊಡುವಂತೆ ಹೇಳಿದರು. ಗಂಡನು ಬಂದ ಕೂಡಲೇ ಮಲಗಿದ್ದನ್ನೂ, ಕಷಾಯ ಕುದಿಸಲು ಹೇಳಿದ್ದನ್ನೂ ಕೇಳಿ, ಹೆಂಡತಿ ತುಸು ಗಾಬರಿಯಾಗಿ ಬೇಗಬೇಗನೆ ಕಷಾಯ ಕುದಿಸತೊಡಗಿದಳು.

ಸ್ವಲ್ಪ ಹೊತ್ತಿಗೆ ದೊಡ್ಡ ವಿದ್ಯಾರ್ಥಿ ಅವರ ಬಳಿಗೆ ಬಂದು, ತನ್ನ ಕೈಯಲ್ಲಿರುವ ಇಪತ್ತನಾಲ್ಕು ದಿರಹಾಂ ನಾಣ್ಯಗಳ ಗಂಟನ್ನು ಮಾಸ್ತರಿಗೆ ಕೊಡುತ್ತ, "ಮಾಸ್ತರೇ, ನಿಮ್ಮ ಶಿಷ್ಯರು ನಿಮ್ಮ ಚಿಕಿತ್ಸೆಗಾಗಿ ಚಂದಾ ಹಾಕಿ ಈ ಹಣ ಕೊಟ್ಟರು" ಎಂದನು.

ಈ ಮಾತು ಕೇಳಿ ಮಾಸ್ತರ್ರಿಗೆ ವಿದ್ಯಾರ್ಥಿಗಳ ಮೇಲೆ ಒಮ್ಮೆಗೇ ತುಂಬಾ ವಾತ್ಸಲ್ಯವು ಹುಟ್ಟಿತು. ಅವರಿಗೆ ಆ ದಿನ ಆಟವಾಡಲು ಅಪ್ಪಣೆ ಕೊಟ್ಟು ಬಿಟ್ಟರು. ಇದಕ್ಕಾಗಿಯೇ ವಿದ್ಯಾರ್ಥಿಗಳು ಚಂದಾ ಹಾಕಿ ಕಳುಹಿಸಿದ್ದಾರೆಂಬ ಗುಟ್ಟು ಆ ಮಾಸ್ತರ ತಲೆಗೆ ಗೊತ್ತಾಗಲಿಲ್ಲ.

ಮಾಸ್ತರಿಗೆ ಹಣವನ್ನು ನೋಡಿ ಆನಂದವಾದರೂ, ತನ್ನ ರೋಗವನ್ನು ಕುರಿತು ಚಿಂತೆ ಹತ್ತಿಕೊಂಡೇ ಇತ್ತು. ಅದಕ್ಕೆ ತಕ್ಕ ಹಾಗೆ ದೊಡ್ಡ ವಿದ್ಯಾರ್ಥಿ ಮಾರಣೇ ದಿನ ಬೆಳಿಗ್ಗೆ ಬಂದು, ಮಾಸ್ತರನ್ನು ನೋಡಿ ಭಯಪಡುತ್ತ, "ಅಲ್ಲಾ ನಿಮ್ಮನ್ನು ಕಾಪಾಡಬೇಕು. ಇವತ್ತು ನಿಮ್ಮ ಮುಖ ಇನ್ನಿಷ್ಟು ಹಳದಿಯಾಗೇ ಇದೆ!" ಎಂದನು.

ಅವನ ಮಾತು ಕೇಳಿದ ಮೇಲೆ ಮಾಸ್ತರು, ತಾನು ಶ್ರದ್ಧೆಯಿಂದ ಚಿಕಿತ್ಸೆ ಪಡೆಯಲೇಬೇಕೆಂದೂ, ಅದಕ್ಕಾಗಿ ಹುಡುಗರು ಕೊಟ್ಟ ಹಣವನ್ನು ಖರ್ಚು ಮಾಡಲೇಬೇಕೆಂದೂ ನಿಶ್ಚಯಿಸಿಕೊಂಡರು. ದೊಡ್ಡ



ವಿದ್ಯಾರ್ಥಿಯನ್ನು ನೋಡಿ, "ನಾನು ಔಷಧ ಕುಡಿದು ಪಥ್ಯದಲ್ಲಿರುತ್ತೇನೆ. ನೀನು ಹೋಗಿ ಶಾಲೆ ನೋಡಿ ಕೊಳ್ಳಪ್ಪ. ಹುಡುಗರೆಲ್ಲ ಚೆಂದಾಗಿ ಓದಲಿ." ಎಂದು ಹೇಳಿ ಅವನನ್ನು ಕಳುಹಿಸಿದರು.

ಹೀಗೆ ಒಂದು ವಾರ ಕಳೆಯಿತು. ದೊಡ್ಡ ವಿದ್ಯಾರ್ಥಿ ಮತ್ತೊಂದು ಸಾರಿ ವಿದ್ಯಾರ್ಥಿಗಳ ಚಂದಾ ಎಂದು ಮತ್ತೆ ಇಪ್ಪತ್ತನಾಲ್ಕು ದಿರಹಾಂ ತಂದು ಕೊಟ್ಟು, "ಇವು ನಿಮ್ಮ ಚಿಕಿತ್ಸೆಗಾಗಿ ನಮ್ಮ ವಿದ್ಯಾರ್ಥಿಗಳು ಸೇರಿಸಿಕೊಟ್ಟದ್ದು" ಎಂದನು.

ಮಾಸ್ತರ್ರಿಗಾದ ಆನಂದ ಅಷ್ಟಿಷ್ಟೆಂದು ಹೇಳ ಲಾಗದು. ಆದರೆ ತನಗೆ ಯಾವ ರೋಗವೂ ಇಲ್ಲ ವೆಂದು ಈಗ ಅವರಿಗೆ ಗೊತ್ತಾಗಿತ್ತು. ಆದರೇನು? ಕಷ್ಟಪಟ್ಟು ಪಾಠ ಹೇಳಿಕೊಡುವುದಕ್ಕಿಂತಲೂ ಮಕ್ಕ ಳಿಂದ ಬರುವ ಚಂದಾ ಹಣವನ್ನು ಪಡೆದುಕೊಳ್ಳ ವುದೇ ಲಾಭದಾಯಕವಾಗಿ ಅವರಿಗೆ ತೋರಿತು. ಹೀಗೆ ಸಾಗುವಷ್ಟು ಕಾಲ ಸಾಗಿದರೆ ಒಳ್ಳೆಯದೇ ಎಂದುಕೊಂಡರು.

ದೊಡ್ಡ ವಿದ್ಯಾರ್ಥಿ ತನ್ನನ್ನು ನೋಡಲು ಬಂದಾಗ ಲೆಲ್ಲಾ ಮಾಸ್ತರು ತನಗೆ ಆಹಾರದ ಮೇಲೆ ಹಿತ ವಿಲ್ಲದೆ ಹೋಗಿದೆಯೆಂದೂ, ಬಹಳ ನಿತ್ರಾಣವಾಗಿದೆ ಯೆಂದೂ ಹಸಿವೆ ಸತ್ತಿದೆಯೆಂದೂ ಏನೋ ಒಂದು ಹೇಳುತ್ತಾ ಬರುತ್ತಿದ್ದರು. ದುರದೃಷ್ಟವಶಾತ್ ಒಂದು ದಿನ ಮಾಸ್ತರು ಕುದಿಸಿದ ಮೊಟ್ಟೆಯನ್ನು ತಿನ್ನಲು ನೋಡುತ್ತಿದ್ದಾಗಲೇ ದೊಡ್ಡ ವಿದ್ಯಾರ್ಥಿ ಬಂದುಬಿಟ್ಟನು. ಅವನನ್ನು ನೋಡಿದ ಕೂಡಲೇ ಮಾಸ್ತರು ಬಿಸಿಬಿಸೀ ಮೊಟ್ಟೆಯನ್ನು ಬಾಯಿಗೆ ಹಾಕಿ ಕೊಂಡಾಗಿತ್ತು. ಬಾಯಿ ಸುಟ್ಟು ಬೊಕ್ಕೆಗಳೇಳು ತ್ತಿದ್ದುವು. ಬುದ್ಧಿಗೆಟ್ಟ ವಿದ್ಯಾರ್ಥಿ ಮರ್ಯಾದೆ ತಿಳಿದು ನೋಡದವನಂತೆ ಹೊರಟು ಹೋಗುವುದಕ್ಕೆ ಬದಲಾಗಿ, ಮಾಸ್ತರ್ರ ಮುಖವನ್ನೇ ನೋಡಿ ಗಾಬರಿ ಯಿಂದ "ಅಯ್ಯೋ! ನಿಮ್ಮ ಕೆಪ್ಪಡೆ ಬಾತು ಹೋಗಿದೆಯಲ್ಲಾರೀ! ಏನೋ ಕುರದಹಾಗಿದೆ!" ಎಂದನು.

ಬಿಸಿಯ ಕಾಟದಿಂದ ತಿಕಮಕರಾಗಿದ್ದ ಮಾಸ್ತರು ಬಾಯಿಬಿಟ್ಟು ಮಾತಾಡುವ ಸ್ಥಿತಿಯಲ್ಲಿರಲಿಲ್ಲ. ಆದು ದರಿಂದ ವಿದ್ಯಾರ್ಥಿಯೇ ಪುನಃ "ಅದನ್ನು ಚುಚ್ಚಿದರೆ ಹೇಗೆ ರಶಿಗೆ ಬರುತ್ತೆ ನೋಡಿ!" ಎನ್ನುತ್ತಾ ಅಲ್ಲಿದ್ದ ದಬ್ಬಣವನ್ನು ಎತ್ತಿಕೊಂಡು ಮಾಸ್ತರ ಹತ್ತಿರ ಧಾವಿ ಸಿದನು. ಮಾಸ್ತರು ತಟಕ್ಕನೆದ್ದು ಒಳಗೆ ಓಡಿ ಹೋಗಿ ಮೊಟ್ಟೆಯನ್ನು ಉಗುಳಿಬಿಟ್ಟರು. ಆದರೆ ಆಗಲೇ ಬಾಯಿಯೊಳಗೆ ಸುಟ್ಟು ಬೊಕ್ಕೆಗಳೆದ್ದು ವ್ರಣವಾಯಿತು.

ತರುವಾಯ ಕ್ಷೌರಿಕನನ್ನು ಕರೆಯಿಸಿ ಶಸ್ತ್ರಚಿಕಿತ್ಸೆ ಕೂಡಾ ಮಾಡಿಸಿಕೊಳ್ಳಬೇಕಾಯಿತು.





# ರಾಜಕಳ್ಳ

ಒಂದು ಕಾಲದಲ್ಲಿ ಗರುಡರಾಜ್ಯವು ತುಂಬ ಸಿರಿ ಸಂಪತ್ತುಗಳಿಂದ ತಲೆದೂಗಿಕೊಂಡಿತ್ತು. ಪ್ರಜೆಗಳು ಯಾವ ಕೊರತೆಯೂ ಇಲ್ಲದೆ ನಿಶ್ಚಿಂತರಾಗಿದ್ದರು. ಅಂತಹ ಒಳ್ಳೆಯ ಕಾಲದಲ್ಲಿ ನಾಗಣ್ಣನೆಂಬ ದೊಡ್ಡ ಕಳ್ಳನೊಬ್ಬ ಅವತಾರವೆತ್ತಿ ಎಲ್ಲೆಂದರಲ್ಲಿ ಕಳ್ಳತನ ಮಾಡಿಕೊಂಡಿದ್ದ. ಅವನನ್ನು ಹಿಡಿಯಬೇಕೆಂದು ರಾಜನು ಮಾಡಿದ ಯಾವ ಪ್ರಯತ್ನವೂ ಫಲಕಾರಿಯಾಗಲಿಲ್ಲ.

ಕಳ್ಳ ನಾಗಣ್ಣನನ್ನು ಹಿಡಿಯಲು ತುಬ್ಬು ಕೊಟ್ಟವರಿಗೆ, ಅವನ ಗುರುತು ಚಹರೆ ತಿಳಿಸಿದವರಿಗೆ ದೊಡ್ಡ ಬಹುಮಾನ ಕೊಡುವುದಾಗಿ ರಾಜನು ಪ್ರಕಟಿಸಿದ್ದನು. ಕಡೇಪಕ್ಷ ಅವನ ಉದ್ದಗಿಡ್ಡದ ಜಾಡು ಸಹಾ ರಾಜನಿಗೆ ಗೊತ್ತಾಗಲಿಲ್ಲ.

ಆ ಪರಿಸ್ಥಿತಿಯಲ್ಲಿ ಮಂತ್ರಿ ರಾಮವರ್ಮನು ರಾಜನ ಬಳಿಗೆ ಬಂದು, "ನಾನು ಕಳ್ಳ ನಾಗಣ್ಣನನ್ನು ಎರಡೇ ದಿನಗಳಲ್ಲಿ ಹಿಡಿದುಕೊಡುತ್ತೇನೆ" ಎಂದು ಮಾತುಕೊಟ್ಟನು.

ಅಷ್ಟು ಸಾವಿರ ಮಂದಿ ಭಟರೂ, ಪುರಜನರೂ ಮಾಡಲಾಗದೆ ಹೋದ ಕೆಲಸವನ್ನು ತನ್ನ ಮಂತ್ರಿ ಅಷ್ಟು ಬೇಗನೆ ಮಾಡುತ್ತೇನೆಂದುದನ್ನು ಕೇಳಿ ರಾಜನಿಗಾದ ಆಶ್ಚರ್ಯಕ್ಕೆ ಮೇರೆಯಿಲ್ಲ.

ಎರಡು ದಿನಗಳು ಕಳೆಯಿತು. ಎರಡನೇದಿನ ರಾತ್ರಿ ಮಂತ್ರಿಯೂ ಮತ್ತೆ ನಾಲ್ಕು ಮಂದಿಗಳೂ ಕೂಡಿ, ಒಬ್ಬ ಬಲಿಷ್ಠನಾದ ಮನುಷ್ಯನನ್ನು ಬಂಧಿಸಿ ರಾಜನಬಳಿಗೆ ಎಳೆದುಕೊಂಡುಬಂಧರು.

"ಯಾರಿವನು ?" ಎಂದು ಕೇಳಿದ ರಾಜ. ಮಂತ್ರಿ ಬಂಧಿಸಿ ನಿಲ್ಲಿಸಲ್ಪಟ್ಟವನನ್ನು ರಾಜನಿಗೆ ತೋರಿಸಿ, "ಇವನೇ ಕಳ್ಳ ನಾಗಣ್ಣ. ಇವನ ಸಾಹಸವನ್ನೂ ಅಹಂಕಾರವನ್ನೂ ಕೇಳಿದರೆ ಆಶ್ಚರ್ಯವಾಗುತ್ತದೆ. ಇವನು ನಮ್ಮ ಮನೆಗೇ ದೋಚಿಕೊಳ್ಳಲು ಬಂದ. ನಾನು ಇವನನ್ನು ಹಿಡಿಯುವ ಕಂಕಣ ತೊಟ್ಟದ್ದು ಹೇಗೋ ತಿಳಿದುಕೊಂಡಿದ್ದಾನೆ. ಸಿಕ್ಕಿಬಿದ್ದ. ಇವನನ್ನು ಬೆಳಗಿನವರೆಗೆ ರಾಜಗೃಹದಲ್ಲಿ ನಿರ್ಬಂಧದಲ್ಲಿ ಇಡಿಸಿಬಿಡಿ. ನಾಳೆ ಸಭೆಯಲ್ಲಿ ಬಹಿರಂಗ ವಿಚಾರಣೆ ನಡೆಸೋಣ" ಎಂದನು.

ಮರುದಿನ ಬೆಳಗಾಯಿತು. ಕಳ್ಳ ನಾಗಣ್ಣ ಸಿಕ್ಕಿಬಿದ್ದಿರುವ ಸಂಗತಿ ದೇಶದಲ್ಲೆಲ್ಲಾ ಕಾಡುಗಿಚ್ಚಿನ ಹಾಗೆ ಹರಡಿತು. ಆ ದೊಡ್ಡ ಕಳ್ಳನನ್ನೂ ಅವನ ವಿಚಾರಣೆ

ಎನ್. ಎನ್. ರಾಜ

ಯನ್ನೂ ನೋಡಲಿಕ್ಕೆ ಎಲ್ಲೆಲ್ಲಿಂದಲೋ ಜನರು ಗುಂಪು ಗುಂಪಾಗಿ ಬಂದರು.

ವಿಚಾರಣೆ ಬಹಳ ಹೊತ್ತೇನೂ ನಡೆಯಲಿಲ್ಲ. ರಾಜನು ಕೇಳಿದ ಕೂಡಲೇ ತಾನು ದೊಡ್ಡ ಕಳ್ಳನೆಂಬುದು ನಿಜವೆಂದೂ, ರಾಜ್ಯದಲ್ಲೆಲ್ಲಾ ಬಹಳ ಕಳ್ಳತನ ಮಾಡಿದ್ದೇನೆಂದೂ ನಾಗಣ್ಣ ಒಪ್ಪಿಕೊಂಡನು.

"ಈ ದುಷ್ಟನಿಗೆ ಏನು ಶಿಕ್ಷೆ ಕೊಡಬೇಕು?" ಎಂದು ರಾಜನು ಸಭೆಯಲ್ಲಿದ್ದವರನ್ನು ನೋಡಿ ಕೇಳಿದನು.

ಕೆಲವಂದಿ ಪೌರರು ಅವನ ತಲೆ ಕತ್ತರಿಸಬೇಕೆಂದರು. ಮತ್ತೆ ಕೆಲವರು ಅವನನ್ನು ಗಲ್ಲಿಗೆ ಹಾಕಬೇಕೆಂದರು. ಅದೆಲ್ಲದಕ್ಕಿಂತ ಶೂಲಕ್ಕೇರಿಸುವುದೇ ಒಳ್ಳೆಯದೆಂದು ಮತ್ತೆ ಕೆಲವರು ಹೇಳಿದರು.

ಆಗ ಮಂತ್ರಿ ರಾಮವರ್ಮ ರಾಜನೊಂದಿಗೆ, "ಮಹಾರಾಜರೆ, ಇವನಿಂದ ನಾವು ಬಹಳ ನಷ್ಟ ಹೋಗಿದ್ದೇವೆ. ಇವನನ್ನು ಕೊಂದುಬಿಟ್ಟರೆ ನಮಗೆ ಲಾಭವೇನಿಲ್ಲ. ಇವನಿಂದ ನಮಗೆ ಲಾಭ ಉಂಟಾಗಬೇಕಾದರೆ ಇವನಿಗೆ ದೇಶ ಬಹಿಷ್ಕರಣ ಶಿಕ್ಷೆ ಕೊಡುವುದೇ ಒಳ್ಳೆಯದು. ಏಕೆಂದರೆ ಕಳ್ಳನಾಗಿರುವವನು ಎಂದೆಂದಿಗೂ ಆ ಬುದ್ಧಿ ಬಿಡುವುದಿಲ್ಲ! ಹಾಗೆ ಇವನನ್ನು ದೇಶದಿಂದ ಹೊರಗೆ ಹಾಕಿದರೆ ಇವನು ನಮ್ಮ ಸುತ್ತು ಮುತ್ತಲಿನ ದೇಶಗಳಿಗೆ ಹೋಗಿ, ಅಲ್ಲಿ ತನ್ನ ಕೊಳ್ಳೆ ಹೊಡೆಯುವ ಕೆಲಸ ಮಾಡುತ್ತ, ಅರಾಜಕವನ್ನು ಸೃಷ್ಟಿಸುತ್ತಾನೆ. ಅದರಿಂದ ನಮಗೆ ಎಷ್ಟೋ ಒಳಿತಾಗಬಹುದು." ಎಂದು ರಾಜಕೀಯವಾಗಿ ಸಲಹೆಕೊಟ್ಟನು.

ರಾಜನಿಗ ಈ ಆಲೋಚನೆ ಹಿಡಿಸಿತು. ಅವನು ಆಗಿಂದಾಗಲೇ ನಾಗಣ್ಣನಿಗೆ ದೇಶ ಬಹಿಷ್ಕರಣ ಶಿಕ್ಷೆ ವಿಧಿಸಿ, ಬಂಧಮುಕ್ತ ಮಾಡಿ ಕೂಡಲೇ ರಾಜ್ಯಬಿಟ್ಟು ಹೊರಟುಹೋಗಲು ಹೇಳಿದನು.

ನಾಗಣ್ಣ ಹೊರಟನು. ಅವನು ರಾಜ್ಯದ ಮೇರೆ ದಾಟಿ ಒಂದು ನಿರ್ಜನ ಪ್ರಾಂತವನ್ನು ಸೇರಿ, ಏನೋ ಆಲೋಚಿಸುತ್ತ ನಿಲ್ಲಲು, ಇನ್ನೊಬ್ಬ ಮನುಷ್ಯ ಅವನ ಹತ್ತಿರ ಬಂದು, "ಯಾರು ನೀನು? ಏನಾಯಿತು?" ಎಂದು ಕೇಳಿದ.

"ಕಳ್ಳ ನಾಗಣ್ಣನೆಂದರೆ ನಾನೇ! ಕಡೆಗೆ ಹೀಗಾದೆ" ಎಂದ ನಾಗಣ್ಣ. "ಸುಳ್ಳು! ಕಳ್ಳ ನಾಗಣ್ಣನೆಂದರೆ ನಾನು. ನನ್ನ ಹೆಸರಿಟ್ಟುಕೊಂಡು ನೀನೇಕೆ ಕಷ್ಟಪಡುವೆ?" ಎಂದು ಕೇಳಿದ ಹೊಸಬ.

ಕೂಡಲೇ ನಾಗಣ್ಣನಾಗಿ ನಟಿಸಿದ ಮಂತ್ರಿಯ ಮಗನು ಕಳ್ಳ ನಾಗಣ್ಣನನ್ನು ಗಟ್ಟಿಯಾಗಿ ಅಮುಕಿ ಹಿಡಿದನು. ಅವನ ಹಿಂದೆ ವೇಷ ಬದಲಾಯಿಸಿಕೊಂಡು ಬಂದಿದ್ದ ರಾಜಭಟರೂ ಓಡಿ ಬಂದು ಆ ಕಳ್ಳನ ಕೈಕಾಲು ಕಟ್ಟಿ ಬಂಧಿಸಿದರು.






# ಗುಟ್ಟು ಗೊತ್ತಾಯ್ತು

ಒಂದು ಊರಿನಲ್ಲಿ ಶಿವರಾಮನೆಂಬ ರೈತನಿದ್ದನು. ಅವನಿಗೆ ಸಾಕಾಗುವಷ್ಟು ಆಸ್ತಿಯಿದ್ದಿತು. ಒಳ್ಳೆಯ ಹುಟ್ಟುವಳಿ ಬರುತ್ತಿದ್ದಿತು. ಆದರೆ ಶಿವರಾಮನಿಗೆ ಹಣವನ್ನು ಗಂಟು ಕಟ್ಟಿಕೊಳ್ಳುವುದೆಂದರೆ ತುಂಬ ಇಷ್ಟ. ತನ್ನ ಇಬ್ಬರು ಮಗಂದಿರೂ ಬೆಳೆದು ದೊಡ್ಡವರಾದ ಮೇಲೆ ಶಿವರಾಮನು ಅವರಿಗೆ ಮದುವೆಗಳನ್ನು ಮಾಡಿ, ವ್ಯವಸಾಯದ ಜವಾಬ್ದಾರಿಯನ್ನು ಅವರ ಮೇಲೆ ಹಾಕಿದನು.

ಶಿವರಾಮನ ಗುಣಗಳು ಅವನ ಮಗಂದಿರಿಬ್ಬರಿಗೂ ಹಿಡಿಸಲಿಲ್ಲ. ಏಕೆಂದರೆ ಅವರು ಖರ್ಚು ಮಾಡುವ ಪ್ರತಿ ಪೈಸೆಗೂ ಲೆಕ್ಕ ಕೇಳುತ್ತಿದ್ದನು. ಕಿರು ತಿಂಡಿ, ರುಚಿರುಚಿಯಾದ ಅಡಿಗೆ ಮುಂತಾದ್ದಕ್ಕೆ ಶಿವರಾಮನು ಒಪ್ಪುವವನಲ್ಲ. ಮಗಂದಿರು ವ್ಯವಸಾಯ ಮಾಡಿ ಬರುವ ಹಣವನ್ನೆಲ್ಲ ತಂದೆಯ ಕೈಗೇ ಕೊಡಬೇಕಾಗಿತ್ತು.

ಹೀಗೆ ದಿನಗಳುರುಳುತ್ತಿರಲು, ಒಂದುಸಾರಿ ಶಿವರಾಮನಿಗೆ ರೋಗಬಂದಿತು. ಮಗಂದಿರು ವೈದ್ಯರನ್ನು ಕರೆಯಿಸಲು ನೋಡಿದರೆ ಅವನು ಒಪ್ಪಲಿಲ್ಲ. ತನ್ನಂತೆ ಗುಣವಾಗುತ್ತದೆಂದು ಹೇಳಿಬಿಟ್ಟನು. ಆದರೆ ದಿನ ಹೋದ ಹಾಗೆ ರೋಗವು ಬೆಳೆಯಿತು. ಮಾತು ಬಿದ್ದುಹೋಯಿತು. ಆಗ ಕೂಡಾ ಮಗಂದಿರು ವೈದ್ಯರನ್ನು ಕರೆತರುವೆವೆಂದರೆ, ಬೇಡಬೇಡವೆಂದು ಸನ್ನೆ ಮಾಡಿ ತಡೆದುಬಿಟ್ಟನು.

ಒಂದು ದಿನ ದೊಡ್ಡ ಮಗನು ಶಿವರಾಮನು ಮಲಗಿದ್ದ ಕೋಣೆಗೆ ಬಂದು, "ಅಪ್ಪಾ, ಈ ಕೋಣೆ ನನ್ನ ಭಾಗಕ್ಕೆ ಬಂದಿದೆ. ಇದನ್ನು ದುರಸ್ತಿ ಮಾಡಿಸಬೇಕು. ಅಷ್ಟರವರೆಗೆ ನೀವು ದನಗಳ ಹಟ್ಟಿಯಲ್ಲಿ ಮಲಕ್ಕೊಂಡಿರಿ!" ಎಂದು ಹೇಳಿ, ಮಂಚ ಸಮೇತ ಶಿವರಾಮನನ್ನು ಹಟ್ಟಿಯಲ್ಲಿ ಸೇರಿಸಿದನು.

ಆಮೇಲೆ ಶಿವರಾಮನಿಗೆ ಹೆಚ್ಚೆಚ್ಚು ಕಷ್ಟವೇ ಆಯಿತು. ಮಗಂದಿರೂ ಸೊಸೆಯಂದಿರೂ ಅವನನ್ನು ಕುರಿತು ಹಚ್ಚಿಕೊಳ್ಳುವುದನ್ನೇ ಬಿಟ್ಟರು. ಸರಿಯಾದ ತಿಂಡಿಯಿಲ್ಲದೆ, ಮದ್ದಿನ ಸಂಗತಿ ಮೊದಲೇ ಇಲ್ಲದೆ ಶಿವರಾಮನಿಗೆ ಕೈಕಾಲುಗಳು ಕೂಡಾ ಮರಗಟ್ಟಿ ಹೋದುವು.

ಒಂದು ದಿನ ಹಟ್ಟಿಯೊಳಗೆ ಬಂದಿದ್ದ ದೊಡ್ಡ ಮಗನು ತನ್ನ ತಂದೆ ಪಡುವ ಅವಸ್ಥೆಯನ್ನು ನೋಡಿ ಆಶ್ಚರ್ಯಪಟ್ಟನು. ಶಿವರಾಮನು ಏನೋ ಹೇಳಲು

ಎನ್. ರಾಜೇಶ್ವರಿ

ಪ್ರಯತ್ನಿಸುತ್ತಿದ್ದಾನೆ. ಕೈ ಎತ್ತಲಿಕ್ಕೆ ಕೂಡಾ ಪ್ರಯತ್ನಿಸುತ್ತಿದ್ದಾನೆ. ಅವನ ಕಣ್ಣಿನಲ್ಲಿ ಏನೋ ಕೋರಿಕೆ ತೇಲಾಡುತ್ತಿದೆ. ಏನಿರಬಹುದು ?

ದೊಡ್ಡ ಮಗನು ತನ್ನ ತಮ್ಮನನ್ನು ಕರೆದನು. ತರುವಾಯ ಇಬ್ಬರು ಸೊಸೆಯಂದಿರೂ ಬಂದರು. ಊರಿನೊಳಗಿನವರು ಕೂಡಾ ಕೆಲವರು ಬಂದರು. ಶಿವರಾಮನು ಏನು ಹೇಳಲಿಕ್ಕೆ ಪ್ರಯತ್ನಿಸುತ್ತಾನೆಂಬುದು ಯಾರಿಗೂ ಗೊತ್ತಾಗಲಿಲ್ಲ.

ಕಡೆಗೆ ಎಲ್ಲರೂ ಸೇರಿ ಒಂದು ಅಭಿಪ್ರಾಯಕ್ಕೆ ಬಂದರು: ಶಿವರಾಮನಂತಹ ಕೃಪಣಗುಣದವರು ಎಷ್ಟು ಹಣವನ್ನಾದರೂ ಕೂಡಿಸಿಟ್ಟು, ಎಲ್ಲಿಯೋ ಅಡಗಿಸಿಟ್ಟಿರಬೇಕು. ಆ ರಹಸ್ಯವನ್ನು ಮಗಂದಿರಿಗೆ ಹೇಳಬೇಕೆಂದು ಪ್ರಯತ್ನಿಸುತ್ತಿದ್ದಾನೆ. ಒಳ್ಳೆಯ ವೈದ್ಯರನ್ನು ಕರೆಯಿಸಿ ಮಾತು ಬರುವ ಹಾಗೆ ಮಾಡಿದ ಹೊರತು ಆ ರಹಸ್ಯ ಹೊರಗೆ ಬಾರದು.

ಅದು ನಿಜವೆಂದು ಎಲ್ಲರಿಗೂ ತೋರಿತು. ಕೂಡಲೇ ಮಗಂದಿರಿಬ್ಬರೂ ಶಿವರಾಮನನ್ನು ಪಟ್ಟಣಕ್ಕೆ ತೆಗೆದುಕೊಂಡು ಹೋಗಿ ಅಲ್ಲಿರುವ ದೊಡ್ಡದೊಡ್ಡ ವೈದ್ಯರಿಂದ ಚಿಕಿತ್ಸೆ ನಡೆಸಿದರು. ಹಣ ಖರ್ಚಾಗುವುದೆಂದು ಶಿವರಾಮನು ತಟಪಟಾಯಿಸುವುದು ಗೊತ್ತಾಗುತ್ತಲೇ ಇತ್ತು. ಆದರೆ ಮಗಂದಿರು ಬಿಡಲಿಲ್ಲ. ಹಟ ಹಿಡಿದು ಚಿಕಿತ್ಸೆ ಮಾಡಿಸಿ ತಂದೆಗೆ ಮಾತು ಬರುವ ಹಾಗೆ ಮಾಡಿದರು.

ಅವನಿಗೆ ಪೂರ್ತಿ ಗುಣವಾದ ಮೇಲೆ ಮಗಂದಿರೂ ಸೊಸೆಯಂದಿರೂ ಅವನ ಸುತ್ತಲೂ ಕೂಡಿ, "ಎಲ್ಲಿ ಹಣ ಅಡಗಿಸಿಟ್ಟಿದ್ದೀರಿ ?" ಎಂದು ಕೇಳಿದರು.

ಶಿವರಾಮನು ಆಶ್ಚರ್ಯ ಪಡುತ್ತ, "ಹಣ ಅಡಗಿಸಿಡುವುದೆ ? ನಾನೆ ? ಎಲ್ಲಿಯೂ ಇಟ್ಟಿಲ್ಲವಲ್ಲಾ ?" ಎಂದನು.

"ಮತ್ತೆ ಆದಿನ ಏನೋ ಹೇಳಬೇಕೆಂದು ಬಹಳ ಆಯಾಸಪಟ್ಟಿರಿ ? ಏಕೆ ?" ಎಂದು ಮಗಂದಿರು ಕೇಳಿದರು.

ಶಿವರಾಮನು ಸ್ವಲ್ಪ ಆಲೋಚನೆ ಮಾಡಿ ಜ್ಞಾಪಿಸಿಕೊಂಡು, "ಓ ! ಅದೋ ? ಹಟ್ಟಿಯಲ್ಲಿದ್ದಿತಲ್ಲಾ ಆ ಕರು ? ಅದು ಕಸಬಳಿಯುವ ಪೊರಕೆಯನ್ನು ಎಳೆದು ಸುಮ್ಮನೆ ಜಗಿಯುತ್ತಾ ಇತ್ತು. ಕಸಪೊರಕೆ ವೃಥಾ ಹಾಳಾಗುತ್ತದಲ್ಲಾ ಅಂತ ತೋರಿತು. ದೊಡ್ಡವ ಬಂದ. ಅವನಿಗೆ ಆ ಮಾತು ಹೇಳಿದರೆ ಅರ್ಥವೇ ಆಗಲಿಲ್ಲ. ನೀವಾದರೂ ಅರ್ಥಮಾಡಿಕೊಳ್ಳುವಿರೇನೋ ಅಂದರೆ ಯಾರಿಗೂ ಅರ್ಥವಾಗಲಿಲ್ಲ. ಒಳ್ಳೆಯ ಕಸಪೊರಕೆ ಯಾಕೂ ಆಗದ ಹಾಗೆ ಆಯಿತಲ್ಲ ! ಒಬ್ಬರಾದರೂ ಗಮನಿಸಿದಿರಾ ?" ಎಂದು ನಿಟ್ಟುಸಿರುಬಿಟ್ಟನು. ಈ ಮಾತು ಕೇಳಿ ಎಲ್ಲರಿಗೂ ಬೆಪ್ಪು ಬಡೆದಂತಾಯಿತು.






# ವರನ ಅರ್ಹತೆ

ಹಿಂದೆ ಕಾಶೀನಗರದಲ್ಲಿ ವಿಶ್ವನಾಥನೆಂಬ ಬಡ ಬ್ರಾಹ್ಮಣನೊಬ್ಬನಿದ್ದನು. ಅವನು ಯಾಚಕ ವೃತ್ತಿಯಿಂದ ಜೀವನ ನಡೆಸುವವನು. ತನ್ನ ಹೆಂಡತಿ ಮಕ್ಕಳಿಗಾಗಿ ಏನೂ ಸೇರಿಸಿಡುವ ಗೊಡವೆಗೇ ಹೋಗುತ್ತಿರಲಿಲ್ಲ. ವಿಶ್ವನಾಥನು ಅಷ್ಟು ಬಡವನಾಗಿದ್ದರೂ ಅವನ ಮಗಳು ಮನೋಜ್ಞೆ ಎಂಬವಳು ಬಹಳ ಚೆಲುವೆಯಾಗಿದ್ದಳು. ಅವನು ಮಗಳನ್ನು ತುಂಬಾ ಪ್ರೀತಿಯಿಂದ ಬೆಳೆಯಿಸುತ್ತಿದ್ದನು.

ಮನೋಜ್ಞೆಗೆ ಮದುವೆಯ ವಯಸ್ಸು ಬಂದಿತು. ಬಡಬ್ರಾಹ್ಮಣನ ಮಗಳಿಗೆ ಮದುವೆಯಾಗುವುದೆಂದರೆ ಮಾತಾಡಿದ ಹಾಗಲ್ಲ. ಹಾಗೆಂದ ಮಾತ್ರಕ್ಕೆ ಯಾರೋ ದಾರೀಹೋಕನಿಗೆ ಮಗಳನ್ನು ಕೊಡಲು ವಿಶ್ವನಾಥನಿಗೆ ಇಷ್ಟವಿರಲಿಲ್ಲ.

ಈ ಪರಿಸ್ಥಿತಿಯಲ್ಲಿ ರಾಜಭಟರು ಬೀದಿಯಲ್ಲಿ ಡಂಗುರ ಹಾಕಿಕೊಂಡು ಹೋಗುವುದು ಕೇಳಿಸಿತು.

"ರಾಜಯ್ಯ ಎಂಬವರ ಮಗನಿಗೆ ವಧು ಬೇಕಾಗಿದೆ. ಸೌಂದರ್ಯವೂ ಸೌಶೀಲ್ಯವೂ ಉಳ್ಳ ಕನ್ಯೆಯರ ತಂದೆಯರು ನಾಳೆ ಬೆಳಿಗ್ಗೆ ಛತ್ರದ ಹತ್ತಿರ ಬಂದು ರಾಜಯ್ಯನವರನ್ನು ನೋಡತಕ್ಕದ್ದು. ವರನು ಆಧಾರವಿಲ್ಲದೆ ನಿಲ್ಲುವವನಲ್ಲ. ಅವನಿಗೆ ಯಾವಾಗಲೂ ಪರಧ್ಯಾನವೇ. ಮೂವರನ್ನು ಕೇಳಿದಹೊರತು ಯಾವ ಕೆಲಸವನ್ನೂ ಮಾಡಲಾರನು. ತಲೆಹೊರೆ ಹೊತ್ತು ಸಂಪಾದಿಸುತ್ತಾನೆ. ಮೇಘದಂತಹ ಗುಣ."

ಈ ಡಂಗುರದ ಮಾತುಗಳನ್ನು ಕೇಳಿ ವಿಶ್ವನಾಥನು ನೆಗಾಡಿಕೊಂಡನು. ವರನು ಕುಂಟನಾಗಿದ್ದಾನೆ, ಮಾತಿಗೇಡಿತನವಿದೆ; ಹೊರೆ ಹೊತ್ತು ಬದುಕುವವನು; ಮೇಘದಂತೆ ಕ್ಷಣದಿಂದ ಕ್ಷಣಕ್ಕೆ ಬದಲಾವಣೆ ಹೊಂದಿ ಕರಗಿ ಸುರಿದು ಬರಿದಾಗುವವನು. ಇಂಥಾ ನಿರುಪಯೋಗಿ ವರನಿಗೆ ಡಂಗುರ ಸಾರುವ ಅಗತ್ಯವೇನೋ! ಅಂಥಾ ದೌರ್ಭಾಗ್ಯನಿಗೆ ಹುಡುಗಿ ಕೊಡುವವನು ಎಂಥಾ ದೌರ್ಭಾಗ್ಯದವನೋ!

ಹಾಗೆ ಸಾರಲಾದ ಡಂಗುವನ್ನು ವಿಶ್ವನಾಥನ ಮನೆಯಲ್ಲಿದ್ದ ಮನೋಜ್ಞೆಯೂ ಕೇಳಿದಳು. ಅವಳು ಮನಸ್ಸುಗೊಟ್ಟು ಕೇಳಿ, ತಲೆದೂಗುತ್ತಾ, ತಂದೆಯೊಡನೆ "ಅಪ್ಪಾ, ನಾವು ಆ ಛತ್ರದ ಬಳಿಗೆ ಹೋಗೋಣ" ಎಂದಳು ತುಸು ನಾಚಿಕೊಂಡು.

"ಬೇಡಮ್ಮಾ! ನಿನ್ನಂಥವಳು ಅಂತಹ ವರನನ್ನೋ ಮದುವೆಯಾಗುವುದು?" ಎಂದ ತಂದೆ. ಕಡೆಗೆ

ಎಂ. ಮಂಜುರಾಣಿ

ಮನೋಜ್ಞೆ ಛತ್ರದ ಬಳಿಗೆ ಹೋಗಲೇ ಬೇಕೆಂದು ಪಟ್ಟುಹಿಡಿದಳು. ಅವಳ ತಿಳಿವಳಿಕೆಯಲ್ಲಿ ನಂಬುಗೆ ಇರುವ ವಿಶ್ವನಾಥನು ಸರಿಯೆಂದು ಒಪ್ಪಿದನು.

ತಂದೆ ಮಗಳು ಇಬ್ಬರೂ ಛತ್ರಕ್ಕೆ ಹೋದರು. ಮನೋಜ್ಞೆ, ಅಲ್ಲಿರುವ ರಾಜಯ್ಯನು ಯಾರೆಂದು ನೋಡಿ, ಆತನ ಬಳಿಗೆ ಹೋಗಿ, "ಅಯ್ಯಾ, ನಿಮ್ಮ ಕುಮಾರರನ್ನು, ಅವರೂ ಒಪ್ಪಿದರೆ ಮದುವೆ ಯಾಗುತ್ತೇನೆ" ಎಂದಳು ವಿನಯದಿಂದ.

"ಅಮ್ಮಾ, ನನ್ನ ಮಗನ ಲಕ್ಷಣಗಳನ್ನೆಲ್ಲಾ ಸರಿಯಾಗಿ ಕೇಳಿಕೊಂಡೆಯಾ ? ಏನೋ ಪುತ್ರವಾತ್ಸಲ್ಯದಿಂದ ಅವನಿಗೆ ಮದುವೆ ಮಾಡಬೇಕೆಂದು ನಿಶ್ಚಯಿಸಿಬಿಟ್ಟೆ, ಅಷ್ಟೇ ! ಒತ್ತಾಯವಿಲ್ಲ. ಚೆನ್ನಾಗಿ ಆಲೋಚಿಸಿ ಹೇಳಮ್ಮ" ಎಂದ ರಾಜಯ್ಯ.

ಮನೋಜ್ಞೆ ಮುಗುಳು ನಕ್ಕು, "ಅಯ್ಯಾ, ಇದರಲ್ಲಿ ಆಲೋಚನೆಗೆ ಏನಿದೆ ? ನಿಮ್ಮ ಮಗನನ್ನು ಈಗಾಗಲೇ ಒಬ್ಬಳು ಮದುವೆಯಾಗಿದ್ದಾಳೆತಾನೇ ? ಅಂದಮೇಲೆ ನನಗೇನು ತಡೆ ?" ಎಂದಳು.

ರಾಜಯ್ಯನ ಮುಖವು ಅರಳಿತು. ಅವನು ನಗುತ್ತ, "ಹಾಗಾದರೆ ಸರಿ. ನಿನ್ನನ್ನು ಸೊಸೆಯನ್ನಾಗಿ ಸ್ವೀಕರಿಸುತ್ತೇನೆ" ಎಂದನು.

ರಾಜಯ್ಯನು ವಿಶ್ವನಾಥನ ಎಲ್ಲಾ ವಿವರಗಳನ್ನೂ ತಿಳಿದುಕೊಂಡು ತಂದೆ ಮಗಳನ್ನು ಮನೆಗೆ ಕಳುಹಿಸಿದನು. ಮನೆಗೆ ಬಂದಕೂಡಲೇ ವಿಶ್ವನಾಥನು, "ವರನನ್ನೇ ತೋರಿಸಲಿಲ್ಲ ನೀನು ಅವನನ್ನು ಅರಿ ಕೊಂಡದ್ದು ಮಾತ್ರವಲ್ಲದೆ ನಿನಗೊಬ್ಬಳು ಸವತಿಯೂ ಇದ್ದಾಳಲ್ಲಾ !" ಎಂದ ಕಳವಳದಿಂದ.

"ಅಪ್ಪಾ, ಆ ವರನು ಯಾರು ಗೊತ್ತೇ ? ಕಾಶೀರಾಜನೇ ! ಧರ್ಮದ ಆಧಾರದಲ್ಲೇ ನಿಲ್ಲುವವನು, ಪರರನ್ನು ಕುರಿತೇ ಯಾವಾಗಲೂ ಆಲೋಚಿಸುವವನು. ಮಂತ್ರಿಗಳೊಂದಿಗೆ ಆಲೋಚನೆ ಮಾಡದೆ ಏನೂ ಮಾಡುವವನಲ್ಲ. ಕಿರೀಟ ಹೊತ್ತ ಭಾರದಿಂದಲೇ ಸಂಪಾದಿಸುವವನು. ಸಮುದ್ರದಿಂದ ಉಪ್ಪುನೀರನ್ನು ಗ್ರಹಿಸಿ ಜನರಿಗೆ ಒಳ್ಳೆಯ ನೀರು ಸುರಿಸುವ ಮೇಘದಂತಹ ಗುಣವುಳ್ಳವನು !" ಎಂದಳು ಮನೋಜ್ಞೆ.

"ಅವನ ಮೊದಲನೇ ಹೆಂಡತಿ ಯಾರು ?" ಎಂದು ವಿಶ್ವನಾಥನು ಕೇಳಿದನು. "ಇನ್ನಾರು ? ಭೂದೇವಿಯೇ !" ಎಂದಳು ಮನೋಜ್ಞೆ.

ಅವಳ ಮಾತು ಸರಿಯೆಂದು ಬೇಗದಲ್ಲೇ ಸ್ಪಷ್ಟವಾಯಿತು. ಅವಳಿಗಾಗಿ ರಾಜಭವನದಿಂದ ಚಿನ್ನದ ಮೇನಾ ಬಂದು ಅವಳನ್ನು ಕರೆದೊಯ್ದಿತು. ತರುವಾಯ ಬೇಗನೇ ಬಂದ ಸುಮುಹೂರ್ತದಲ್ಲಿ ಕಾಶೀರಾಜ ಕುಮಾರನೊಂದಿಗೆ ಅವಳ ಮದುವೆ ವೈಭವದಿಂದ ನಡೆಯಿತು.





# ಕರ್ತವ್ಯಲೋಪ

ಶಾಮಶಾಸ್ತ್ರಿ ವೈದ್ಯಕೀಯ ಕಲಿತು ನಗರದಲ್ಲಿ ನೆಲವೂರಿದ್ದನು. ಸ್ವಲ್ಪ ಕಾಲದಲ್ಲೇ ನಗರದಲ್ಲೆಲ್ಲಾ ಅವನಿಗೆ ಒಳ್ಳೆಯ ಹೆಸರು ಬಂತು. ನಗರದ ಬದಿಯಲ್ಲಿರುವ ನದೀ ತೀರದ ದೇವಸ್ಥಾನದಲ್ಲಿ ಉತ್ಸವ ಬಂದಕಾಲದಲ್ಲಿ ಅನೇಕ ಕಡೆಯ ಜನರು ನಗರಕ್ಕೆ ಬರುತ್ತಾರೆ. ಹಾಗೆ ಒಮ್ಮೆ ಉತ್ಸವಕಾಲ ದಲ್ಲಿ ಶಾಮಶಾಸ್ತ್ರಿಯ ಚಿಕ್ಕಂದಿನ ಸ್ನೇಹಿತರಾದ ಶ್ರೀಹರಿಯೂ, ವಿಠಲನೂ ಬಂದಿದ್ದರು. ಶ್ರೀಹರಿ ಉಪಾಧ್ಯಾಯನಾಗಿದ್ದ. ವಿಠಲನು ಚಿಕ್ಕ ಗ್ರಾಮದಲ್ಲಿ ನ್ಯಾಯಾಧಿಕಾರಿ.

ಸಾಯಂಕಾಲದಲ್ಲಿ ಮನೆಗೆ ಬಂದ ತನ್ನ ಮಿತ್ರ ರನ್ನು ಶಾಮಶಾಸ್ತ್ರಿ ಊರೊಳಗೆಲ್ಲಾ ತಿರುಗಾಡಿಸಿ ದೀಪ ಹಚ್ಚುವ ಹೊತ್ತಿಗೆ ಮನೆಗೆ ಕರೆತಂದನು. ಈ ಸ್ನೇಹಿತರಿಗೆ ಕೂಡಾ ಅಡಿಗೆ ಮಾಡಬೇಕೆಂದು ಹೆಂಡತಿಗೆ ಹೇಳಿ, ಚಾವಡಿಗೆ ಬಂದು ಸ್ನೇಹಿತರೊಂದಿಗೆ ಹರಟೆಗೆ ಕುಳಿತನು. ಮಾತಿನ ನಡುವೆ ತಾನು ತನ್ನ ಕರ್ತವ್ಯ ವನ್ನು ನೆರವೇರಿಸುವುದರಲ್ಲಿ ಒಂದುಸಾರಿ ಮಾತ್ರ ಅಕ್ರಮ ಮಾಡಿದ್ದೇನೆಂದು ಸ್ನೇಹಿತರೊಡನೆ ಈ ವಿಧ ವಾಗಿ ಹೇಳಿದನು:

ಆ ಊರಿನಲ್ಲಿ ಒಬ್ಬ ದೊಡ್ಡ ಧನಿಕನು ತಿಂಗಳು ತಿಂಗಳೂ ಏನೋ ಒಂದು ವಿಶೇಷವೆಂದು ನಗರದ ದೊಡ್ಡ ದೊಡ್ಡವರನ್ನೆಲ್ಲ ಮನೆಗೆ ಕರೆಯುತ್ತಿದ್ದ. ಒಂದುಸಾರಿ ಶಾಮಶಾಸ್ತ್ರಿಗೆ ಕೂಡಾ ಆ ಧನಿಕನ ಮನೆಯ ಸಮಾರಾಧನೆಗೆ ಆಹ್ವಾನ ಬಂದಿತು. ಊರೊಳಗಿನ ದೊಡ್ಡ ಮನುಷ್ಯರ ಪಟ್ಟಿಯಲ್ಲಿ ತನ್ನ ಹೆಸರು ಕೂಡಾ ಸೇರಿತೆಂದು ಸಂತೋಷವೆನಿಸಿತು. ಅಲ್ಲಿ ಸೇರುವ ದೊಡ್ಡದೊಡ್ಡವರ ಪರಿಚಯ ಮಾಡಿಕೊಂಡು, ತನ್ನ ವೈದ್ಯ ವೃತ್ತಿಯಲ್ಲಿ ಇನ್ನಷ್ಟು ಮುಂದಕ್ಕೆ ಬರಬಹುದೆಂದು ತೋರಿತು ಶಾಮಶಾಸ್ತ್ರಿಗೆ.

ಅವನು ಮನೆಯಲ್ಲಿದ್ದ ಒಳ್ಳೆಯ ಬಟ್ಟೆಗಳನ್ನು ಉಟ್ಟುಕೊಂಡು ಸಮಾರಾಧನೆಗೆ ಹೊರಡುತ್ತಿರು ವಾಗಲೇ, ಒಬ್ಬಳು ಬಡಹೆಂಗುಸು ಅಳುತ್ತಾ ಬಂದು ಅವನ ಕಾಲಿಗೆ ಬಿದ್ದು "ಅಯ್ಯಾ, ಬೇಗ ಬಂದು ತನ್ನ ಗಂಡನ ಪ್ರಾಣ ಉಳಿಸಿರೀ, ಹತ್ತು ಮಂದಿ ಮಕ್ಕಳ ಗತಿಯನ್ನು ಕಾಪಾಡಿರೀ. ಅವರಿಗೆ ಏನೋ ಆಗಿ ಥಕ್ಕನೆ ಬಿದ್ದುಬಿಟ್ಟಿದ್ದಾರೆ ಸ್ವಾಮೀ!" ಎಂದು ದೀನಳಾಗಿ ಬೇಡಿಕೊಂಡಳು.

ಎಂ. ಕೆ. ಈಶ್ವರರಾವು

ಶಾಮಶಾಸ್ತ್ರಿಯ ಮನಸ್ಸು ಸಮಾರಾಧನೆಯ ಮನೆಯಲ್ಲೇ ಇದ್ದಿತು. ಅಲ್ಲದೆ ಈ ಬಡ ಹೆಂಗುಸಿನ ಮನೆಗೆ ಹೋಗಿ ವೈದ್ಯಕೀಯ ನಡೆಸುವುದರಿಂದ ತನಗೇನೂ ಲಾಭ ಗಿಟ್ಟದು. ಆದುದರಿಂದ ಅವನು "ಅವಸರದ ಕೆಲಸದ ಮೇಲೆ ಹೊರಟಿದ್ದೇನೆ, ಅದು ಮುಗಿಸಿ ಬರುತ್ತೇನೆ" ಎಂದು ಹೇಳಿ, ಅವಳ ಪ್ರತ್ಯುತ್ತರಕ್ಕೂ ಕಾಯದೆ ತನ್ನ ಪಾಡಿಗೆ ಹೊರಟುಹೋದನು.

ಆದರೆ ತೀರಾ ಆ ಧನಿಕರಲ್ಲಿಗೆ ಹೋದಾಗ, ಥಕ್ಕನೆ ಮೈಲಿಗೆ ಅವಾಂತರ ಬಂದು ಅಲ್ಲಿ ಸಮಾರಾಧನೆ ನಿಂತು ಹೋಯಿತೆಂದು ಗೊತ್ತಾಯಿತು. ಶಾಮಶಾಸ್ತ್ರಿ ಮನೆಗೆ ಹಿಂದಿರುಗಿ ಆ ಬಡ ಹೆಂಗುಸಿನ ಮನೆಗೆ ಹೋಗಿ ನೋಡಿದರೆ, ಎಲ್ಲವೂ ಮಿಂಚಿ ಹೋಗಿತ್ತು. ಸಮಯಕ್ಕೆ ಚಿಕಿತ್ಸೆ ನಡೆಯದೆ ಅವಳ ಗಂಡ ತೀರಿಹೋಗಿದ್ದ.

ಈ ಒಂದು ಸಂದರ್ಭಬಿಟ್ಟರೆ ನಾನು ನನ್ನ ಕರ್ತವ್ಯ ನಿರ್ವಹಣೆಯಲ್ಲಿ ಮತ್ತೆಂದೂ ತಪ್ಪು ಮಾಡಲಿಲ್ಲ." ಎಂದು ಮುಗಿಸಿದ ಶಾಮಶಾಸ್ತ್ರಿ.

"ನಿನ್ನ ಹಾಗೆಯೇ ನಾನು ಕೂಡಾ ಒಂದೇ ಒಂದು ಸಾರಿ ನನ್ನ ಧರ್ಮವನ್ನು ಅತಿಕ್ರಮಿಸಿದ್ದೇನೆ" ಎಂದು ಶಾಲೆಯ. ಉಪಾಧ್ಯಾಯನಾದ ಶ್ರೀಹರಿ ಹೀಗೆ ಹೇಳಿದನು:

ಅವನು ಕೆಲಸ ಮಾಡುವ ಶಾಲೆಯ ಯಜಮಾನ ಆ ಗ್ರಾಮದ ಜಮೀನ್ದಾರ. ಶಾಲೆಯಲ್ಲಿ ಜಮೀನ್ದಾರರ ಮಗನೂ ಓದುತ್ತಿದ್ದ. ಅವನು ಶಾಲೆಯ ಒಡೆಯ ತನ್ನ ಅಪ್ಪನೇ ಎಂದುಕೊಂಡು ಓದು ಬರಹಗಳಲ್ಲಿ ಅಸಡ್ಡೆಯಾಗಿದ್ದರೂ, ವಿದ್ಯಾರ್ಥಿಗಳಲ್ಲಿ ಮೊದಲನೆಯವನಾಗಿ ಕುಳಿತಿರುವನು. ಆ ಶಾಲೆಯಲ್ಲಿ ಒಬ್ಬ ಒಕ್ಕಲಿಗನ ಮಗನೂ ಓದುತ್ತಿದ್ದ. ಅವನು ಬಹಳ ಚುರುಕು ಬುದ್ಧಿಯ ಹುಡುಗ. ಪ್ರತಿ ವಿಷಯದಲ್ಲಿಯೂ ಜಮೀನ್ದಾರ್ರ ಮಗನನ್ನು ಮೀರಿಸಿಕೊಂಡಿದ್ದ.

ಆದುದರಿಂದ ಜಮೀನ್ದಾರರ ಮಗ ಆ ಒಕ್ಕಲಿಗರ ಮಗನನ್ನು ಶಾಲೆಯಿಂದ ಹೊರಗೆ ಹಾಕಬೇಕೆಂದು ಶ್ರೀಹರಿ ಮಾಸ್ತರನ್ನು ಕೇಳಿಕೊಂಡನು. ಅವನು



ಹೇಳಿದ ಹಾಗೆ ಮಾಡದೆ ಹೋದರೆ ಜಮೀನ್ದಾರರು ತನ್ನನ್ನೇ ಶಾಲೆಯಿಂದ ಕಿತ್ತು ಹಾಕುವರೇನೋ ಎಂದು ಶ್ರೀಹರಿಗೆ ಭಯವಾಯಿ. ಆದುದರಿಂದ ಶ್ರೀಹರಿ ಆ ಒಕ್ಕಲಿಗರ ಮಗನಿಗೆ ಓದಿಸದ ಪಾಠಗಳಲ್ಲಿ ಪ್ರಶ್ನೆಗಳನ್ನು ಹಾಕಿ, ಆ ಪಾಠ ಇನ್ನೂ ಕಲಿಸಲಿಲ್ಲ ವೆಂದು ಅವನು ಹೇಳಿದುದಕ್ಕೆ ಅವನ ಮೇಲೆ ಅವಿಧೇಯತೆಯ ವ್ಯಾಜದಲ್ಲಿ ಕೆಂಡಕಾರಿ, ಅವನನ್ನು ಶಾಲೆಯ ಪಟ್ಟಿಯಿಂದ ತೆಗೆದು ಹಾಕಿದನು.

ಒಕ್ಕಲಿಗನಿಗೆ ನಡೆದುದೆಲ್ಲಾ ಅನ್ಯಾಯವೆಂದು ಗೊತ್ತಿತ್ತು. ಆದರೂ ಅವನು ಜಮೀನ್ದಾರರಿಗೆ ಹೆದರಿ ಮಾತಾಡದೆ ಸುಮ್ಮನಿದ್ದುಬಿಟ್ಟನು. ಚೆನ್ನಾಗಿ ಓದಿಕೊಂಡು ಮುಂದಕ್ಕೆ ಬರಬೇಕಾಗಿದ್ದ ಆ ಹುಡುಗ, ತಂದೆಯೊಂದಿಗೆ ಬೇಸಾಯದ ಕೆಲಸ ನೋಡಿಕೊಳ್ಳ ಬೇಕಾಗಿ ಬಂತು.

"ನಿಮ್ಮ ಹಾಗೆ ನಾನು ಕೂಡಾ ಒಂದೇ ಒಂದು ಸಾರಿ ನನ್ನ ಕರ್ತವ್ಯದಲ್ಲಿ ತಪ್ಪಿದ್ದೇನೆ" ಎಂದು ನ್ಯಾಯಾಧಿಕಾರಿಯಾದ ವಿಠಲನು ಹೀಗೆಂದನು :

ಒಂದುಸಾರಿ ಅವನ ಹತ್ತಿರ ಒಂದು ವಿವಾದವು ಬಂದಿತು. ಒಬ್ಬ ದೊಡ್ಡ ವ್ಯಾಪಾರಿ ತನ್ನ ಜಾಗ ದಲ್ಲಿ ದೊಡ್ಡದೊಂದು ಮನೆಯನ್ನು ಕಟ್ಟಿದನು. ಅವನ ಸ್ಥಳದ ಪಕ್ಕದಲ್ಲೇ ಒಬ್ಬ ರೈತನ ಜಾಗವೂ ಗುಡಿಸಲೂ ಇದ್ದುವು.

ಎಷ್ಟು ಕೇಳಿದರೂ ರೈತ ಆ ಜಾಗವನ್ನು ವ್ಯಾಪಾ ರಿಗೆ ಮಾರಲು ಒಪ್ಪಲಿಲ್ಲ. ಕಡೆಗೆ ವ್ಯಾಪಾರಿ ತನ್ನ ಆಳುಗಳ ಮೂಲಕ ಬಲವಂತವಾಗಿ ಆ ರೈತನ ಗುಡಿಸಲನ್ನು ಕೆಡವಿಸಿ ಸ್ಥಳವನ್ನು ಆಕ್ರಮಿಸಿ ಕೊಂಡನು. ರೈತ ನ್ಯಾಯಾಧಿಪತಿ ವಿಠಲನ ಹತ್ತಿರ ಫಿರ್ಯಾದಿ ತಂದ.

ನಿಜ ಸಂಗತಿ ವಿಠಲನಿಗೆ ಗೊತ್ತಿತ್ತು. ಆದರೆ ವಿಠಲನ ತಂಗಿಯನ್ನು ವ್ಯಾಪಾರಿಯ ಮಗನಿಗೆ ಕೊಟ್ಟು ಮದುವೆಮಾಡಲು ಮಾತು ನಡೆಯುತ್ತಿತ್ತು. ವ್ಯಾಪಾರಿ ತುಂಬ ಮಾತಿನವಾಸಿ ಪಡೆದ ಗೌರವಸ್ಥ. ಆದುದರಿಂದ ವಿಠಲನು ವ್ಯಾಪಾರಿಗೆ ಅನುಕೂಲ ವಾಗಿಯೇ ತೀರ್ಪು ಹೇಳಿಬಿಟ್ಟನು.



"ಇದೊಂದೇ ನಾನು ನನ್ನ ಉದ್ಯೋಗದಲ್ಲಿ ಮಾಡಿದ ತಪ್ಪು ಕೆಲಸ" ಎಂದು ಮುಗಿಸಿದ ವಿಠಲ.

"ಒಟ್ಟಿನ ಮೇಲೆ ನಾವೆಲ್ಲಾ ನಮ್ಮ ನಮ್ಮ ಕರ್ತವ್ಯವನ್ನು ಸಕ್ರಮವಾಗಿ ನೆರವೇರಿಸಿಕೊಂಡಿದ್ದೇವೆಂದೇ ಹೇಳಬೇಕು. ಸರಿ, ಹೊತ್ತಾಯಿತು. ಇನ್ನು ಊಟಕ್ಕೇಳಿರಿ !" ಎಂದು ಶಾಮಶಾಸ್ತ್ರಿ ಅಡಿಗೆ ಮನೆಯೊಳಗೆ ಹೋಗಿ ಒಮ್ಮೆಲೇ ಗಾಬರಿಯಾದನು.

ಅವನ ಹೆಂಡತಿ ಅಡಿಗೆ ಕೆಲಸದ ಯಾವ ಪ್ರಯತ್ನವನ್ನೂ ಮಾಡಿರಲಿಲ್ಲ. ಹೊರಬಾಗಿಲ ಬಳಿಯಲ್ಲೇ ಕುಳಿತುಕೊಂಡು ಚಾವಡಿಯಲ್ಲಿ ನಡೆದ ಮಾತುಕತೆಗಳನ್ನು ಕೇಳಿಕೊಂಡಿದ್ದಳು.

"ಇದೇನು ಹೀಗೆ ಕುಳಿತಿದ್ದೀಯೇ ? ಅಡಿಗೆ ಮಾಡಿಲ್ಲವಲ್ಲಾ !" ಎಂದು ಶಾಮಶಾಸ್ತ್ರಿ ಅವಳನ್ನು ದುರುದುರು ನೋಡಿದ.

"ಮಾಡಿಲ್ಲ. ನನಗೆ ಯಾಕೋ ಮೈನೋವು; ತಲೆನೋವು" ಎಂದಳು ಹೆಂಡತಿ. ಆ ಮಾತು ಕೇಳಿ ಶಾಮಶಾಸ್ತ್ರಿಗೆ ಕೆಟ್ಟಕೋಪ ಬಂತು. ಈ ಸಮಯಕ್ಕೆ ಊಟದಂಗಡಿಗಳನ್ನು ಕೂಡಾ ಮುಚ್ಚಿರುತ್ತಾರೆ. ಅಪರೂಪಕ್ಕೆ ಬಂದ ತನ್ನ ಸ್ನೇಹಿತರನ್ನು ಉಪವಾಸ ಮಲಗಿಸಬೇಕಾಯಿತೆ ? ತನಗೂ ಹಸಿವೆಯ ಬೆಂಕಿ ಧಗಧಗಿಸುತ್ತಿದೆ. ಇವಳಿಗೆ ಆಗಲೇ ಹೇಳಲಿಕ್ಕೇನಂತೇ ?

ಕೋಪದಿಂದಲೂ ಹಸಿವೆಯಿಂದಲೂ ಹೆಂಡತಿಯ ಮೇಲೆ ಕೈಯೆತ್ತಲು ನೋಡಿದ ಶಾಮಶಾಸ್ತ್ರಿ.

"ನಿಲ್ಲಿರಿ. ನಾನೀಗ ಒಂದುಸಾರಿ ನನ್ನ ಕರ್ತವ್ಯ ನೆರವೇರಿಸದೆ ಹೋದುದಕ್ಕೇ ಹೀಗೆ ಹೊಡೆಯಲಿಕ್ಕೆ ಬರುತ್ತೀರಲ್ಲಾ ? ಈಗೇನು ಮುಳುಗಿಹೋಯಿತು ? ಒಂದು ಹೊತ್ತು ಉಪವಾಸವಿದ್ದ ಮಾತ್ರಕ್ಕೆ ಯಾರೂ ಸಾಯುವುದಿಲ್ಲಷ್ಟೆ ? ಆದರೆ ವೈದ್ಯರಾದವರು ತನ್ನ ಕರ್ತವ್ಯ ತಪ್ಪಿದರೆ ಒಬ್ಬ ಮನುಷ್ಯನ ಪ್ರಾಣವೇ ಹೋಗಿಬಿಡುತ್ತದೆ. ಉಪಾಧ್ಯಾಯರು ವಿದ್ಯಾರ್ಥಿಗೆ ಮಾಡಿದ ಅನೀತಿಯಿಂದ ಅವನ ಜೀವಿತವೇ ಭ್ರಷ್ಟವಾಗಿ ಹೋಗುತ್ತದೆ. ನ್ಯಾಯಾಧಿಕಾರಿ ಅನ್ಯಾಯದ ತೀರ್ಪುಕೊಟ್ಟರೆ ಒಬ್ಬ ಮನುಷ್ಯ ಕುಟುಂಬದೊಂದಿಗೆ ದಾರಿಗೆ ಬೀಳುತ್ತಾನೆ. ಇಂಥಾ ವೃತ್ತಿಗಳಲ್ಲಿರುವವರು ಒಂದೇ ಒಂದುಸಾರಿ ತಪ್ಪು ಮಾಡಿದರೂ ಕ್ಷಮಿಸಲೇಬಾರದು ನನ್ನ ಕೇಳಿದರೆ ! ನೀವು ಮೂವರಿಗೂ ಈ ವಿಷಯ ಗೊತ್ತಾಗುವುದಿಲ್ಲವೆಂದರೇನು ? ಹುಂ, ಹೋಗಲಿ. ಈಗ ಎಲ್ಲರೂ ಹೋಗಿ ಕೈಕಾಲು ತೊಳೆದುಕೊಂಡು ಬನ್ನಿ. ಅಡಿಗೆ ತಯಾರಾಗಿದೆ. ಬಡಿಸುತ್ತೇನೆ" ಎಂದಳು ಶಾಮಾಶಾಸ್ತ್ರಿಯ ಹೆಂಡತಿ. ಅರಳು ಹುರಿದ ಹಾಗೆ ಹೊರಟ ಅವಳ ಮಾತಿಗೆ ಎಲ್ಲರೂ ಮೂಕರಾಗಿ, ಸುಮ್ಮನೆ ಊಟ ಮಾಡಿ ಎದ್ದರು.





# ರುರು-ಪ್ರಮದ್ವರರು

ಅನೇಕ ಸಾವಿರ ವರ್ಷಗಳ ಕೆಳಗೆ ಸಿಂಧು, ಸರಸ್ವತೀ ನದೀ ಪ್ರಾಂತಗಳಲ್ಲಿ ದೊಡ್ಡದೊಂದು ನಾಗರಿಕತೆ ಬೆಳಗಿತ್ತು. ಆಗಿನ ಜನರು ಪ್ರಕೃತಿಯೊಂದಿಗೂ, ದೇವತೆಗಳೊಂದಿಗೂ ಸನ್ನಿಹಿತರಾಗಿ ಜೀವಿಸಿದರು.



ಅವರಲ್ಲಿ ವೇದಕರ್ತರಾದ ಋಷಿಗಳೂ ಇದ್ದರು. ಅವರು ಸುಖಜೀವನವನ್ನೂ, ದೀರ್ಘಾಯುವನ್ನೂ ಬಯಸಿ, ಜನನ ಮರಣಗಳನ್ನು ಕುರಿತು, ಜನ್ಮ ರಹಸ್ಯವನ್ನು ಕುರಿತು ತುಂಬಾ ಆಲೋಚನೆ ಮಾಡಿದರು. ರುರು ಎಂಬ ಯುವಕ ಆ ಕಾಲದವನು.



ರುರು ಒಬ್ಬ ಋಷಿಯ ಕುಮಾರ. ಆ ಋಷಿ ಪ್ರಮದ್ವರ ಎಂಬ ಗಂಧರ್ವ ಕನ್ಯೆಯನ್ನು ಬೆಳೆಯಿಸಿಕೊಂಡಿದ್ದನು. ರುರು-ಪ್ರಮದ್ವರರು ಅರಣ್ಯಗಳಲ್ಲಿಯೂ, ನದೀ ತೀರದಲ್ಲಿಯೂ ಸ್ವೇಚ್ಛೆಯಿಂದ ಸಂತೋಷದಿಂದ ಆಟವಾಡುತ್ತ ವಿಹರಿಸುತ್ತಿದ್ದರು.



ಅವರಿಗೆ ಯುಕ್ತವಯಸ್ಸು ಬಂದ ಮೇಲೆ ಇಬ್ಬರಿಗೂ ಮದುವೆ ನಿಶ್ಚಯವಾಯಿತು. ಮದುವೆಯ ಮುಂಚಿನ ದಿನ ರುರು ಅರಣ್ಯಕ್ಕೆ ಹೋಗಿ ಪ್ರಮದ್ವರೆಗಾಗಿ ಹೂವುಗಳನ್ನು ಕೊಯಿದುಕೊಂಡು ಬಂದನು. ಅವನು ಹಿಂದಿರುಗಿ ಬರುವುದನ್ನು ಪ್ರಮದ್ವರ ನೋಡಿದಳು.



ಆಕಸ್ಮಿಕವಾಗಿ ಒಂದು ಸರ್ಪ ಪ್ರಮದ್ವರೆಯನ್ನು ಕಡಿದು ಓಡಿಹೋಯಿತು. ಅವಳ ಮುಖವು ವಿವರ್ಣವಾಗುವುದನ್ನು ನೋಡಿ ರುರು ಓಡಿ ಬಂದು ಬೀಳುವವಳನ್ನು ಹಿಡಿದನು.



ಪ್ರಮದ್ವರ ಕೂಡಲೇ ಸಾಯಲಿಲ್ಲ. ಅವನ ಕರೆಯನ್ನು ಕೇಳಿ ಕಣ್ಣು ತೆರೆದಳು. ಆದರೆ ಅವಳ ಕಂಠವು ಬಲಹೀನವಾಗಿಹೋಯಿತು. ಕಣ್ಣು ಮುಚ್ಚಿಕೊಂಡವು.

ಹಳ್ಳಿಗಳಲ್ಲಿರುವ ಸ್ತ್ರೀಯರು ಬಂದು ಪ್ರಮದ್ವರೆಯ ಮೃತದೇಹವನ್ನು ತೆಗೆದುಕೊಂಡು ಹೋದರು. ರುರು ಬಹಳ ಹೊತ್ತು ಒಬ್ಬನೇ ಸ್ತಬ್ಧನಾಗಿ ಕುಳಿತನು. ತನ್ನನ್ನು ಪ್ರಮದ್ವರೆಯಿಂದ ಅಗಲಿಸಿದ ಮೃತ್ಯು ಯಾವುದು ?





ರುರು ತನ್ನ ವಿಧಿಯನ್ನು ಹಳಿಯುತ್ತ ಅನೇಕ ದಿನಗಳವರೆಗೆ ಅಡವಡವಿ ತಿರುಗಿದನು. ಅವನಿಗೆ ಸಮಾಧಾನ ಹೇಳುವ ಸಾಹಸ ಯಾರಿಗೂ ಬರಲಿಲ್ಲ. ಅವನೆಲ್ಲಿ ಶಪಿಸಿ ಬಿಡುವನೋ ಎಂದು ಎಲ್ಲರೂ ಅವನನ್ನು ಮಾತಾಡಿಸಲು ಹೆದರಿದರು.

ಕಟ್ಟಕಡೆಗೆ ಮನ್ಮಥನು ಅವನ ಎದುರು ಪ್ರತ್ಯಕ್ಷನಾಗಿ, ಯಮಲೋಕಕ್ಕೆ ಹೋಗುವ ಮಾರ್ಗವನ್ನು ರುರುವಿಗೆ ತಿಳಿಸಿದನು.





ಹಾಗೆಯೇ ರುರು ಯಮಲೋಕಕ್ಕೆ ಹೋದನು. ಆ ಲೋಕದಲ್ಲಿರುವ ಭಯಂಕರ ಯಮಕಿಂಕರರನ್ನು ಲಕ್ಷ್ಯಮಾಡದೆ ಅವನು ನೆಟ್ಟಗೆ ಯಮನ ಬಳಿಗೇ ಹೋದನು.



ಆದರೆ ಯಮನು ಅವನ ಪ್ರಾರ್ಥನೆಗೂ, ಲಂಚಗಳಿಗೂ ಬಗ್ಗಲಿಲ್ಲ. ರುರು ತನ್ನ ಆಯುಸ್ಸಿನಲ್ಲಿ ಅರ್ಧಭಾಗ ಧಾರೆಯೆರೆದ ಹೊರತು ಪ್ರಮದ್ವರ ಬದುಕುವುದಿಲ್ಲವೆಂದಾಯಿತು. ರುರು ನಿಃಸಂಕೋಚವಾಗಿ ತನ್ನ ಅರ್ಧಾಯುಷ್ಯವನ್ನು ಅವಳಿಗೆ ಧಾರೆ ಎರೆದನು.



ಮರುಕ್ಷಣ ರುರು ಭೂಮಿಯ ಮೇಲೆ ಪ್ರಮದ್ವರೆಯ ಬಳಿಯಲ್ಲೇ ಇದ್ದನು. ಇಬ್ಬರೂ ನಿದ್ರೆಯಿಂದ ಎದ್ದವರಂತಿದ್ದರು. ಅವರ ವಿವಾಹಕ್ಕೆ ಅನೇಕಮಂದಿ ಋಷಿಗಳು ಬಂದು ಆಶೀರ್ವಾದ ಮಾಡಿದರು.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫
### ಗೆದ್ದ ಶೀರ್ಷಿಕೆಗಳು ೧೯೭೮ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







Srivatsa S. Vati — V. Muthuraman

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಏಪ್ರಿಲ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟ್ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಫೆಬ್ರವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಎಂದಿಗೂ ಬಾಡದು

ಎರಡನೇ ಫೋಟೋ : ಇಂದಿಗೇ ಅರಳಿದೆ

ಕಳುಹಿಸಿದವರು : ಶ್ರೀಮತಿ. ಕೆ. ನಾಗಮಣಿ,

೩/೩೦, ಶ್ರೀನಿವಾಸ ನಿಲಯ, ಓಬಲಪ್ಪಗಾರ್ಡನ್, ಬೆಂಗಳೂರು–೧೧

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.



# ಮಾಯಾ ಸರೋವರ

April 1978

೧೭

[ ಹೆಬ್ಬುಲಿಹೆಗ್ಗನನ್ನೂ ಪೂಜಾರಿಯನ್ನೂ ಸಿದ್ಧಸಾಧಕನು ಬಂಧಿಸಿ ಆ ಕಡೆಗೆ ಬಂದಿದ್ದ ಕನಕಾಕ್ಷ ಮಹಾರಾಜರನ್ನು ನೋಡಲು ಸಾಗಿದನು. ಹಂಸ ರಥದಲ್ಲಿದ್ದ ಜಯಶೀಲನಿಗೆ ಹುಲಿಯ ಬಾಯಿಗೆ ಬೀಳಲಿದ್ದ ಕಾಂಚನಮಾಲೆ ಕಾಣಿಸಿದಳು. ಅವನು ಕೆಳಗೆ ಹಾರಿ ಅವಳನ್ನು ಕಾಪಾಡುವಾಗ, ಮರೆಯಲ್ಲಿದ್ದ ಮಾಯಾ ಸರೋವರೇಶ್ವರನು ಅವನ ಕೊರಳಿಗೆ ಉರುಳುಹಗ್ಗವನ್ನು ಬೀಸಿದನು.]

ತನ್ನ ಕೊರಳಿಗೆ ಜಿಲ್ಲೆಂದು ಹಾವಿನಂತೆ ಛಕ್ಕನೆ ಸುತ್ತಿಕೊಂಡ ತಾಮರೆದಂಟಿನ ಹಗ್ಗದುರುಳು ಬೀಳುತ್ತಲೇ ಜಯಶೀಲನು ಮೆಟ್ಟಿಬಿದ್ದು ಸರ್ಪವೇ ಎಂದುಕೊಂಡು ರೋಮಾಂಚನಗೊಂಡನು. ಮರುಕ್ಷಣದಲ್ಲಿ ಹಗ್ಗವೆಂದು ತಿಳಿದು ಹಿಂದಿರುಗಿ ನೋಡಿದನು. ವಿಚಿತ್ರವಾದ ಜಲಗ್ರಹ ಆನೆಯ ಮೇಲೆ ಕುಳಿತಿದ್ದ ಮಾಯಾ ಸರೋವರೇಶ್ವರನನ್ನೂ, ಅವನ ಪಕ್ಕದಲ್ಲಿ ಕುದುರೆಯ ಮೇಲಿರುವ ಮಕರಕೇತುವನ್ನೂ ನೋಡಿದನು. ಅವನು ತಟ್ಟನೆ ಕತ್ತಿಯನ್ನೆತ್ತಿ ತನ್ನ ಕಂಠಕ್ಕೆ ಸುತ್ತಿದ ಉರುಳು ಬಿಗಿಯುವುದರೊಳಗೆ ಅದನ್ನು ಕಡಿದು ಹಾಕಬೇಕೆಂದು ಮಾಡಿ, ಏಕೋ ಸುಮ್ಮನೆ ನೋಡುತ್ತ ನಿಂತನು. ಅವನ ಕಣ್ಣು ಮಾಯಾ ಸರೋವರೇಶ್ವರನನ್ನೇ ದುರುಗುಟ್ಟಿ ನೋಡುತ್ತಿದ್ದಿತು. ಯಾರಾಗಿರಬಹುದು ಈ ಹೊಸಬ?

ಮಾಯಾ ಸರೋವರೇಶ್ವರನು ತನ್ನ ಕೈಯಲ್ಲಿದ್ದ ತಾಮರೆದಂಟಿನ ಹಗ್ಗದ ಸುರುಳಿಯನ್ನು ಸ್ವಲ್ಪ ಮಾತ್ರ ಎಳೆದು, " ಎಲೋ ಯುವಕನೇ, ಜಯಶೀಲನೆಂಬ ವೀರನು ನೀನೇ ಏನು ? ಕಂಠಕ್ಕೆ ಬಿದ್ದ ಈ ಹಗ್ಗವನ್ನು ಕಡಿಯಲು ಕತ್ತಿ ಹಿರಿದು, ಸುಮ್ಮನೆ ನಿಂತೆಯಲ್ಲಾ ? ಏನು ಆಲೋಚನೆ ಮಾಡುತ್ತೀ ? "



363



ಎಂದು ಕೇಳಿದ. "ಓಹೋ! ಈಗ ತಿಳಿಯಿತು. ಮಾಯಾ ಸರೋವರೇಶ್ವರನೆಂದರೆ ನೀನೇನಾ? ನನ್ನ ಕೊರಳಿಗೆ ಉರುಳು ಬಿಸುಡಿದ ಪುಕ್ಕನಾದ ನೀನು, ಅದನ್ನು ಎಳೆದು ನನ್ನ ಪ್ರಾಣತೆಗೆಯಲು ಪ್ರಯತ್ನ ಮಾಡುವುದಿಲ್ಲವೇಕೆ? ಎಳೆನೋಡು ವಾ, ಎಷ್ಟುಬಲವಿದೆಯೋ? ಅದಕ್ಕಾಗಿಯೇ ಕತ್ತಿ ಹಿಡಿದು ಕಾದಿದ್ದೇನೆ. ಅಷ್ಟರೊಳಗೆ ನಿನ್ನ ಗಟ್ಟಿ ಧೈರ್ಯ ನೀರಾಗಿ ಹೋಯಿತೇನು?" ಎಂದನು ಜಯಶೀಲ.

"ನಿನ್ನ ಮಹಾಸತ್ವ ನೋಡಬೇಕೆಂತಲೇ ಕಾದಿದ್ದೇನೆ. ಮಹಾಸರೋವರದ ರಾಜನಾದ ನಾನು ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರ ಕೊಡಬೇಕಾದ ಅಗತ್ಯವೇನಿಲ್ಲ." ಎಂದ ಮಾಯಾ ಸರೋವರೇಶ್ವರ.

ಜಯಶೀಲನು ಅವನಿಗೇನೋ ಉತ್ತರಕೊಡಲು ನೋಡಿದನು. ಅಷ್ಟರೊಳಗೆ ಕಾಂಚನಮಾಲೆ, ಇದನ್ನೆಲ್ಲ ನೋಡಿ ಬಹಳವಾಗಿ ತಳಮಳಿಸುತ್ತ, ಮಾಯಾ ಸರೋವರೇಶ್ವರನನ್ನು ನೋಡಿ, "ಓಹೋ! ಮಾವಯ್ಯಾ! ನೀವು ಹಂಸಗಳ ರಥದಿಂದ ನೆಲಕ್ಕೆ ಬಿದ್ದು ಹೀಗೆ ಚೆನ್ನಾಗಿದ್ದೀರಲ್ಲಾ! ಆಹಾ! ನಿಮ್ಮನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಆದರೆ ಮಾವಯ್ಯಾ, ನೀವು ಜಯಶೀಲನೆಂಬ ಈ ಯುವಕನಿಗೆ ಯಾವ ಹಾನಿಯೂ ಮಾಡಬಾರದು. ಇವನಿಂದಲೇ ನಾನು ಬದುಕಿದ್ದೇನೆ. ಇಲ್ಲದಿದ್ದರೆ ಇದೀಗ ಹುಲಿಯ ಹೊಟ್ಟೆಯೊಳಗೆ ಹೋಗಿಬಿಡುತ್ತಿದ್ದೆ. ಇವನು ತುಂಬ ಒಳ್ಳೆಯವನು. ಇವನಿಗೆ ಕೋಪ ಬರಿಸಬೇಡ ಮಾವಯ್ಯಾ!" ಎಂದಳು.

"ಅಮ್ಮಾ, ಕಾಂಚನಾ! ಅದನ್ನೆಲ್ಲಾ ನಾನೂ ನನ್ನ ಸ್ವಂತ ಕಣ್ಣುಗಳಿಂದಲೇ ನೋಡಿದ್ದೇನೆ. ಇವನನ್ನು ಕೊಲ್ಲಬೇಕೆಂಬ ಉದ್ದೇಶ ನನಗಿಲ್ಲವೇ ಇಲ್ಲ. ಇವನನ್ನು ಬಂಧಿಸಿ ಹೂವಿನ ಹಾಗೆ ಜೋಪಾನದಿಂದ ನಮ್ಮ ಮಾಯಾ ಸರೋವರಕ್ಕೆ ಕರೆದೊಯ್ಯಬೇಕೆಂದಿದ್ದೇನೆ." ಎಂದನು ಮಾಯಾ ಸರೋವರೇಶ್ವರ.

ಕಾಂಚನಮಾಲೆ ಜಯಶೀಲನನ್ನು ನೋಡಿ, "ಮಾವಯ್ಯನವರು ನಿನಗೇನೂ ಮಾಡಲಾರರೆಂದುದನ್ನು ಕೇಳಿದೆಯಷ್ಟೆ? ನೀನು ಸ್ವಂತ ಇಷ್ಟದಿಂದಲೇ ಮಾಯಾ ಸರೋವರಕ್ಕೆ ಏಕೆ ಬರಕೂಡದು?" ಎಂದು ಕೇಳಿದಳು.

"ಕಾಂಚನಾ, ಇದರಲ್ಲಿ ನನ್ನ ಇಷ್ಟ ಅನಿಷ್ಟಗಳ ಪ್ರಶ್ನೆಯೇ ಇಲ್ಲ. ಈ ಮಾಯಾ ಸರೋವರೇಶ್ವರನೆಂಬ ಮಾಯಗಾರನು ನನ್ನನ್ನು ಜಯಿಸಿ ಬಂದಿಯನ್ನಾಗಿ ಮಾಡಿ ತೆಗೆದುಕೊಂಡು ಹೋಗಬೇಕೆಂದಿದ್ದಾನೆ. ನಾನು ಮನಸ್ಸು ಮಾಡಿದರೆ ಈ ಕ್ಷಣದಲ್ಲೇ ಈ ಉರುಳು ಹಗ್ಗವನ್ನು ಕಡಿದು ಹಾಕಬಲ್ಲೆ. ಅವನ ನಿಜವನ್ನು ಪರೀಕ್ಷಿಸಲಿಕ್ಕೇ ಸುಮ್ಮನಿದ್ದೇನೆ." ಎಂದ ಜಯಶೀಲ.

ಆ ಮಾತನ್ನು ಕೇಳಿ ಮಾಯಾ ಸರೋವರೇಶ್ವರನು ತನ್ನ ಪಕ್ಕದಲ್ಲಿರುವ ಮಕರಕೇತುವಿನೊಂದಿಗೆ, "ಕೇತೂ, ನೀನು ಆಚೆಗೆ ಹೋಗಿ ಜಯಶೀಲನು ಓಡಿ

ಹೋಗದಂತೆ ದಾರಿಗೆ ಅಡ್ಡಗಟ್ಟು. ಅಷ್ಟರೊಳಗೆ ನಾನು ಅವನ ಕೊರಳಿನ ಹಗ್ಗವನ್ನು ಸ್ವಲ್ಪ ಎಳೆದು, ಬಲವನ್ಮರಣವೆಂದರೆ ಹೇಗಿರುವುದೆಂದು ಅವನಿಗೆ ಸ್ವಲ್ಪ ತೋರಿಸಿಬಿಡುತ್ತೇನೆ" ಎಂದನು.

ತನ್ನ ಯಜಮಾನನ ಆ ಮಾತು ಕೇಳಿ ಮಕರ ಕೇತುವಿನ ಮುಖದಲ್ಲಿ ಗಾಬರಿ ಹರಡಿತು. ಯಜಮಾನನಿಗೆ ಇದಿರಾಡಲೂ ಸಾಧ್ಯವಿಲ್ಲದೆ, ಆಜ್ಞೆ ಮೀರಲೂ ಆಗದೆ, ತನ್ನ ಕುದುರೆಯನ್ನು ಆಚೆಯ ಕಡೆಗೆ ಕದಲಿಸಿ ಕೊಂಡುಹೋದನು.

ಅಷ್ಟರಲ್ಲಿ ಕಾಂಚನಮಾಲೆ ಭಯಕಂಪಿತಳಾಗಿ "ಅಯ್ಯಯ್ಯೋ!" ಎಂದು ಕೂಗಿ ಜಯಶೀಲನ ಕಂಠದ ಹಗ್ಗವನ್ನು ಎರಡು ಕೈಗಳಿಂದಲೂ ಹಿಡಿದು ಕೊಂಡು, "ಮಾವಯ್ಯಾ, ಈ ಹಗ್ಗವನ್ನು ಇನ್ನಷ್ಟು ಗಟ್ಟಿಯಾಗಿ ಎಳೆದು ಇವನ ಕಂಠವನ್ನು ಬಿಗಿದಿರಾದರೆ ನಾನೂ ಇವನೊಂದಿಗೇ ಇದೇ ಹಗ್ಗದಿಂದ ಉರುಳು ಹಾಕಿಕೊಂಡು ಸಾಯುತ್ತೇನೆ." ಎನ್ನುತ್ತಾ, ಹಗ್ಗವನ್ನು ತನ್ನ ಕೊರಳಿಗೆ ಸುತ್ತಿಕೊಳ್ಳಲು ಮೇಲೆತ್ತಿದಳು.

"ಆಂ! ಇದೇನಾಶ್ಚರ್ಯ! ಕೆಲವೇ ಕ್ಷಣದೊಳಗೆ ಕಥೆ ಇಷ್ಟುದೂರ ಬಂದುಬಿಟ್ಟಿದೆಯೆಂದಾಯಿತು!" ಎಂದು ಮಾಯಾ ಸರೋವರೇಶ್ವರನು ಆಶ್ಚರ್ಯ ಪಡುತ್ತ, ಸ್ವಲ್ಪ ಆಲೋಚನೆಗೆ ಬಿದ್ದನು. ತಾನು ಅಂದುಕೊಂಡ ಕಾರ್ಯವನ್ನು ನೆರವೇರಿಸುವ ಪ್ರಯತ್ನ ಮಾಡುವುದರಿಂದ ತಪ್ಪೇನಿಲ್ಲವೆಂದು ಕೊಂಡು, ತಲೆಯೆತ್ತಿ ಗಂಭೀರ ಧ್ವನಿಯಿಂದ, "ಎಲೈ, ಜಯಶೀಲಾ! ನೀನು ಕತ್ತಿಯಿಂದ ನಿನ್ನ ಕೊರಳಿಗೆ ಸುತ್ತಿದ ಹಗ್ಗವನ್ನು ತುಂಡುಮಾಡಿಕೊಂಡರೂ, ಅದ್ಭುತ ಶಕ್ತಿಯ ಈ ಜಲಗ್ರಹ ಗಜದ ಕೈಯಿಂದ ತಪ್ಪಿಸಿಕೊಳ್ಳಲಾರೆ. ಇದು ನಿನ್ನನ್ನು ಸೊಂಡಿಲಿಂದೆತ್ತಿ ಹಾಕಿ, ಕಾಲುಗಳಿಂದ ಮಣ್ಣಿಗೆ ಸೇರಿಸಿಬಿಡುತ್ತದೆ. ಕೋರೆದಾಡೆಗಳಿಂದ ನೆಲವನ್ನಗೆದು ನಿನ್ನನ್ನು ಹೂಳಿ ಬಿಡುತ್ತದೆಂದು ತಿಳಿ." ಎಂದನು.



"ಹೌದು ಹೌದು. ನಿನ್ನ ಪರಿಕರಗಳೆಲ್ಲ ನೀನು ಹೆದರಿಸುವುದಕ್ಕೆ ಅನುಗುಣವಾಗಿಯೇ ಇವೆ. ಆಗಲಿ, ಅದನ್ನೂ ನೋಡಿಬಿಡೋಣ! ಪ್ರಾರಂಭಿಸು!" ಎಂದು ಜಯಶೀಲನು ಕತ್ತಿಯನ್ನೆತ್ತಿದನು. ಆಗ ಸಮೀಪ ಬಂದಿದ್ದ ಮಕರಕೇತು, ಸಣ್ಣ ದನಿಯಿಂದ, "ಜಯಶೀಲಾ! ತಾಳು ತಾಳು! ಅವಸರಪಟ್ಟರೆ ಹೆಚ್ಚು ಗಲಾಟೆಗೆ ಆಸ್ಪದವಾದೀತು! ನಮ್ಮ ಸರೋವರೇಶ್ವನು ನಿನ್ನನ್ನು ಮಾಯಾ ಸರೋವರಕ್ಕೆ ಕೊಂಡೊಯ್ಯುವುದರಲ್ಲಿ ಸಣ್ಣದೊಂದು ರಹಸ್ಯವಿದೆ. ಅದೂ ಅಲ್ಲದೆ ನೀನು ಆ ಸರೋವರಕ್ಕೆ ಹೋಗಬೇಕೆಂದು ತುಂಬ ಪ್ರಯತ್ನ ಮಾಡುತ್ತಲೂ ಇರುವೆಯಷ್ಟೆ? ಅವನ ಇಷ್ಟದಂತೆ ನಡೆಯುವುದರಿಂದ ನಿನಗೇನೂ ಕಡಮೆಯಾಗದು. ಯಾವ ಹಾನಿಯೂ ಬರಲಾರದು." ಎಂದನು.

ಮಕರಕೇತು ತನ್ನ ಒಳಿತಿಗಾಗಿಯೇ ಹೇಳುತ್ತಾನೆಂದು ಜಯಶೀಲನಿಗೆ ಗೊತ್ತಾಯಿತು. ಕನಕಾಕ್ಷ



ಮಹಾರಾಜರ ಮಕ್ಕಳಲ್ಲಿ ಕಾಂಚನ ಮಾಲೆಯೊಬ್ಬಳೇ ದೊರಕಿದ್ದಾಳೆ. ಅವರ ಮಗ ಕಾಂಚನವರ್ಮ ಇನ್ನೂ ಆ ಮಾಯಾ ಸರೋವರದಲ್ಲಿ ಬಂದಿಯಾಗಿದ್ದಾನೆ. ಆದರೆ ಈ ಕಾಂಚನಮಾಲೆ ತನ್ನನ್ನು ಅಪಹರಿಸಿ ಕೊಂಡುಹೋದ ಈ ಕಳ್ಳ ಮಾಯಾ ಸರೋವರೇಶ್ವರ ನನ್ನು ಮಾವಯ್ಯಾ ಎನ್ನುತ್ತ ಬಹಳ ಗೌರವ ತೋರಿಸುವುದೊಂದು ಆಶ್ಚರ್ಯವಾಗಿದೆ. ಏನೋ ಕೆಟ್ಟ ಅನುಮಾನವೂ ಬರುತ್ತಿದೆ. ದುಷ್ಟರು ಅವಳ ಬುದ್ಧಿಗೇನೋ ಮಂಕುಮಂತ್ರ ಕವಿಸಿರಬೇಕು.

ಇದರ ಆಳ ನೋಡಬೇಕಾದರೆ ಈಗ ತಗ್ಗಿ ಹೋಗುವುದೇ ಒಳ್ಳೆಯದೆಂದುಕೊಂಡು ಜಯ ಶೀಲನು ಮಾಯಾ ಸರೋವರೇಶ್ವರನನ್ನು ನೋಡಿ, "ಸರಿಯಯ್ಯಾ! ಮಹಾಮಹಿಮನಾದ ಮಾಯಾ ಸರೋವರೇಶ್ವರಾ! ನೀನು ನನಗಿಂತ ಎಷ್ಟೋ ಹೆಚ್ಚಿನ ಬಲವಂತನೆಂಬುದು ಸ್ಪಷ್ಟವೇ ಆಯಿತು. ನಾನೇನೂ ನನ್ನ ಬಲಕ್ಕೆ ಉಬ್ಬಿಕೊಂಡಿಲ್ಲ. ಗುಡ್ಡಗೆ ಗುಡ್ಡ ಅಡ್ಡವಿದ್ದೇ ಇದೆ. ನಾನೀಗ ನಿನಗೆ ವಶನಾಗಿ ಬಿಡುತ್ತೇನೆ. ಮುಂದೆ ನಿನ್ನಿಂದ ಬರುವ ಅಪಾಯಕ್ಕೂ ಎದೆಯೊಡ್ಡಿಕೊಳ್ಳುತ್ತೇನೆ. ಇನ್ನು ನನ್ನನ್ನು ಏನು ಮಾಡಬೇಕೆಂದಿರುವೆ?" ಎಂದು ಕೇಳಿದನು.

"ಹಾಗೇನು? ಒಂದುವೇಳೆ ನಿನ್ನಂಥವನು ಥಕ್ಕನೆ ಹೀಗೆ ಹೇಳುವುದರಲ್ಲಿ ಮೋಸವೇನಿಲ್ಲವಷ್ಟೆ?" ಎಂದು ಕೇಳಿದ ಮಾಯಾ ಸರೋವರೇಶ್ವರ. ಆಗ ಅವನ ದೃಷ್ಟಿ ಜಯಶೀಲನ ಮುಖವನ್ನು ಪರೀಕ್ಷಿಸಿ ಕೊಂಡಿದ್ದಿತು.

"ಬಲಪರಾಕ್ರಮಗಳು ಏನೂ ಇಲ್ಲದವನೇ ಮರೆ ಮೋಸಗಳನ್ನು ಅಡ್ಡವಿಟ್ಟುಕೊಂಡು ಬದುಕುತ್ತಾನೆ. ನಾನು ಎಂಥವನೆಂಬುದು ನಿನ್ನ ಮಂತ್ರಿ ಈ ಮಕರ ಕೇತುವಿಗೆ ಸ್ವಲ್ಪಾದರೂ ತಿಳಿದಿರಬೇಕು. ಅಲ್ಲವೇ ಮಕರಕೇತು? ಏಕೆ ಬಾಯಿ ಮುಚ್ಚಿಕೊಂಡಿರುವಿ?" ಎಂದ ಜಯಶೀಲ, ಮುಗುಳುನಗುತ್ತ.

"ನಾನು ಮಹಾರಾಜನ ಹತ್ತಿರ ಈ ಮೊದಲೇ ಅರಿಕೆ ಮಾಡಿದ್ದೇನೆ; ನೀನು ಮಹಾಸತ್ವಶಾಲಿಗಳ ಗುಂಪಿಗೆ ಸೇರಿದವನೆಂದು ಹೇಳಿದ್ದೇನೆ" ಎಂದ ಮಕರಕೇತು.

"ಹೌದು ಹೌದು. ಇವನ ಸತ್ವ ಎಂತಹದೆಂದು ನಮ್ಮ ಸರೋವರ ಸೇರಿದ ಮೇಲೆ ನೋಡುತ್ತೇನೆ. ನಾವು ಈ ಮೊದಲೇ ಇಲ್ಲೊಬ್ಬ ಜಲವೃಕನನ್ನು ನೋಡಿದೆವಷ್ಟೆ? ಏನು ತಂತ್ರದಿಂದ ಅವನಿಲ್ಲಿದ್ದಾನೋ? ಮಕರಕೇತೂ, ಉಳಿದ ಜಲವೃಕ ಘಾತುಕರು ಇನ್ನೆಷ್ಟು ಘೋರಕೃತ್ಯ ಮಾಡುವರೋ ಅಲ್ಲಿ?" ಎಂದು ಮಾಯಾ ಸರೋವರೇಶ್ವರನು ದೀರ್ಘವಾದೊಂದು ನಿಟ್ಟುಸಿರುಬಿಟ್ಟನು.

"ಅದೆಲ್ಲಾ ಇರಲಿ. ಈಗ ನನ್ನ ಕೊರಳಿಗೆ ಸುತ್ತಿರುವ ಈ ಉರುಳಿನ ಸಂಗತಿ ಏನು?" ಎಂದು ಕೇಳಿದ ಜಯಶೀಲ. ಮಾಯಾ ಸರೋವರೇಶ್ವರನು ಉತ್ತರಕೊಡುವುದರೊಳಗೆ ಕಾಂಚನಮಾಲೆ ನಗುತ್ತ,

"ಅದನ್ನು ನಾನು ಹೇಳುತ್ತೇನೆ. ಇದನ್ನು ಏನೆಂದುಕೊಂಡೆ? ಇದು ಪ್ರಾಣ ತೆಗೆಯುವ ಉರುಳು ಹಗ್ಗವಲ್ಲ. ನಮ್ಮ ಮಾವಯ್ಯನವರು ಬಹುಮಾನವಾಗಿ ನಿನ್ನ ಕೊರಳಿಗೆ ಹಾಕಿದ ತಾವರೆ ಹೂದಂಟಿನ ಹಾರ!" ಎಂದು ಹೇಳುತ್ತಾ ಅದನ್ನು ಅವನ ಕೊರಳಿನಿಂದ ತೆಗೆದುಬಿಟ್ಟಳು.

ಅದನ್ನು ನೋಡಿ ಮಾಯಾ ಸರೋವರೇಶ್ವರನು ತನ್ನಲ್ಲಿ, "ಕಥೆ ಬೇಗನೇ ಮುಗಿಯುವ ಹಾಗಿದೆಯಲ್ಲಾ? ಪಾಪ, ಪದ್ಮಮುಖಿ ಎಲ್ಲದರಲ್ಲಿಯೂ ದುರದೃಷ್ಟವಂತಳೇ. ಕಡೇಪಕ್ಷ ಈ ಜಯಶೀಲ ನಮ್ಮ ಶತ್ರು ಜಲವ್ಯಕರಾಜನನ್ನು ಕೊಲ್ಲಲು ಸಹಾಯ ಮಾಡಿದರೂ ನನಗೆ ದೊಡ್ಡ ಉಪಕಾರವಾದಂತೆ" ಎಂದುಕೊಂಡನು.

"ಮಹಾಪ್ರಭುಗಳೇ, ಈಗ ಏನು ಮಾಡಬೇಕೆಂದು ತಮ್ಮ ಆಜ್ಞೆ?" ಎಂದು ವಿನಯದಿಂದ ಕೇಳಿದ ಮಕರಕೇತು.

"ಈಗ ನಾವೆಲ್ಲರೂ ನಮ್ಮ ಸರೋವರಕ್ಕೆ ಹೋಗಬೇಕು. ಮುಂದೆ ನೀನು ಹೊರಡು. ನನ್ನ ಹಿಂದಿನಿಂದ ಉಳಿದವರು ಹೊರಡಲಿ." ಎಂದು ಆಜ್ಞೆಮಾಡಿದ ಮಾಯಾ ಸರೋವರೇಶ್ವರ.

"ಜಯಶೀಲನು ನಮ್ಮೊಂದಿಗೆ ಕಾಲು ನಡಿಗೆಯಿಂದ ಬರಬಲ್ಲನೇ?" ಎನ್ನುತ್ತ ಮಕರಕೇತು ಜಯಶೀಲನ ಮುಖವನ್ನು ನೋಡಿದನು.

ಆಗ ಮಾಯಾ ಸರೋವರೇಶ್ವರನು, "ಕಾಂಚನಮಾಲೆ ನನ್ನ ಜತೆ ಜಲಗ್ರಹದ ಮೇಲೆ ಬರುತ್ತಾಳೆ. ನೀನೂ ಜಯಶೀಲನೂ ಕುದುರೆಯ ಮೇಲೆ ಹೊರಡಿರಿ." ಎಂದನು.

ಕಾಂಚನಮಾಲೆ ಮತ್ತೆ ಮಾಯಾ ಸರೋವರಕ್ಕೆ ಹೋಗಲ್ಪಡುವ ಸಂಗತಿ ಗೊತ್ತಾದ ಕೂಡಲೇ, ಜಯಶೀಲನು ಅದುರಿಬಿದ್ದು ಮಕರಕೇತುವನ್ನು ನೋಡಿ, "ಎಲೋ ಮಕರಕೇತು, ಕಾಂಚನಮಾಲೆ



ಯನ್ನು ಮತ್ತೆ ನಿಮ್ಮ ಮಾಯಾ ಸರೋವರಕ್ಕೆ ಕರೆದೊಯ್ಯುವುದನ್ನು ನಾನು ಒಪ್ಪಲಾರೆ. ಕನಕಾಕ್ಷ ಮಹಾರಾಜರಿಗೆ ಅಪಹರಿಸಲ್ಪಟ್ಟ ಅವರ ಮಕ್ಕಳಿಬ್ಬರನ್ನೂ ಹುಡುಕಿ ತಂದು ಕೊಡುವುದಾಗಿ ನಾನು ಮಾತು ಕೊಟ್ಟಿದ್ದೇನೆ. ಈಗ ಸಿಕ್ಕಿದ ಕುಮಾರಿಯನ್ನು ಮತ್ತೆ ನಿಮ್ಮ ನಿರ್ಬಂಧಕ್ಕೆ ತೆಗೆದುಕೊಳ್ಳಲು ಸಾಧ್ಯವಿಲ್ಲ. ಇವಳನ್ನಾದರೂ ರಾಜನ ಬಳಿಗೆ ಒಪ್ಪಿಸಿಬಿಡಬೇಕು. ಆ ಕೆಲಸ ನಾನೇ ಮಾಡಿಬಿಡುತ್ತೇನೆ. ರಾಜಕುಮಾರನ ಸಂಗತಿ ಮತ್ತೆ ನೋಡುತ್ತೇನೆ" ಎಂದು ಹೇಳಿ, "ಎಲ್ಲರೂ ನಿಲ್ಲಿರಿ!" ಎಂದು ಗರ್ಜಿಸಿದನು.

ಅವನ ಮಾತು ಕೇಳುತಿದ್ದಂತೆ ಮಾಯಾ ಸರೋವರೇಶ್ವರನಿಗೆ ಕೋಪವೇರುತ್ತಾ ಹೋಯಿತು. ಕಾಂಚನಮಾಲೆಯೂ ತನ್ನನ್ನು ಕೋಪದಿಂದ ನೋಡುವುದನ್ನು ನೋಡಿ ಜಯಶೀಲನು ತುಸು ಬೆರಗಾದನು. ಆಗ ಕಾಂಚನಮಾಲೆ ಅವನನ್ನು ನೋಡಿ, "ಜಯಶೀಲಾ! ನಿನಗೆ ಹೆಚ್ಚಿನ ವಿವರ



ವೇನೂ ತಿಳಿಯದೆ ಹೀಗೆ ಮಾತಾಡುವೆ. ನಾನೂ ನನ್ನ ಅಣ್ಣ ಕಾಂಚನವರ್ಮನೂ ಅರಣ್ಯದಲ್ಲಿ ಅಪಹರಿಸಲ್ಪಟ್ಟ ಮಾತು ನಿಜವೇ. ಆದರೆ ಯಾರ ನಿರ್ಬಂಧದಲ್ಲಿಯೂ ನಾವಿಲ್ಲ. ಈಗ ಅಣ್ಣನನ್ನು ಬಿಟ್ಟು ನಾನೊಬ್ಬಳೇ ತಂದೆ ತಾಯಿಯರ ಬಳಿಗೆ ಹೇಗೆ ಹೋಗಲಿ? ನಿನ್ನಿಂದ ಸಾಧ್ಯವಾದರೆ ಅಣ್ಣನನ್ನು ಕೂಡಾ ನೀನು ಬಂಧನದಿಂದ ಬಿಡಿಸು. ನನ್ನನ್ನು ನೀನು ಆಕಸ್ಮಿಕವಾಗಿ ನೋಡಿ ರಕ್ಷಿಸಿದೆಯೇ ಹೊರತು, ನೀನಾಗಿ ಹುಡುಕಿ ಕಂಡುಹಿಡಿದವಳಲ್ಲವಷ್ಟೆ? ನಾನು ಎಷ್ಟು ಮಾತ್ರಕ್ಕೂ ನಿನ್ನ ಇಷ್ಟದಂತೆ ಬರುವವಳಲ್ಲ. ಮಾವಯ್ಯನೊಂದಿಗೆ ಜಲಗೃಹದಲ್ಲೇ ಹೋಗುತ್ತೇನೆ" ಎಂದು ಹೇಳುತ್ತಾ ಜಲಗೃಹದ ಬಳಿಗೆ ಹೋದಳು.

ಮಾಯಾ ಸರೋವರೇಶ್ವರನು ಕೈಚಾಚಿ ಅವಳನ್ನು ಹಿಡಿದು ಆನೆಯಮೇಲೇರಿಸಿಕೊಂಡನು. ಜಯಶೀಲನು ಅತ್ಯಾಶ್ಚರ್ಯದಿಂದ ಮಕರಕೇತುವನ್ನು ನೋಡಿ, "ಕೇತೂ, ಎಲ್ಲವೂ ವಿಚಿತ್ರವಾಗಿದೆ. ರಾಜನ ಮಕ್ಕಳ ಅಪಹಾರ, ಮಾಯಾ ಸರೋವರ, ಇದೆಲ್ಲಾ ಸುಳ್ಳಲ್ಲವಷ್ಟೆ? ಇವಳು ಈ ರೀತಿಯಾಗಿ ಮಾತಾಡುತ್ತಾಳಲ್ಲಾ? ನೀವೆಲ್ಲಾ ಕೂಡಿ ಮಾಯಾ ಮಂತ್ರ ಹಾಕಿಲ್ಲವಷ್ಟೆ?" ಎಂದನು.

"ಅದೇನಿಲ್ಲ. ಹೇಳುತ್ತೇನೆ. ಮೊದಲು ಬಂದು ಕುದುರೆಯನ್ನು ಆರೋಹಿಸು. ಎಲ್ಲಾ ಸಂಗತಿಯನ್ನೂ ನೀನೇ ನೋಡಿ ತಿಳಿಯುವೆ, ಬಾ" ಎಂದ ಮಕರಕೇತು.

ಜಯಶೀಲನು ಮತ್ತೇನೂ ಹೇಳದೆ ಮಕರಕೇತುವಿನ ಹಿಂದೆ ಕುದುರೆ ಏರಿ ಕುಳಿತನು. ಮಾಯಾ ಸರೋವರೇಶ್ವರನು ತನ್ನ ಜಲಗೃಹವನ್ನು ಮುಂದಕ್ಕೆ ನಡೆಯಿಸಿದನು. ಅದು ವೇಗವಾಗಿ ಹೋಗತೊಡಗಿತು. ಅದನ್ನು ಅನುಸರಿಸಿ ಮಕರಕೇತು ಕುದುರೆಯನ್ನು ಓಡಿಸತೊಡಗಿದನು.

ಆ ಸಮಯದಲ್ಲಿ ಜಯಶೀಲನಿಗೆ ಸಿದ್ಧಸಾಧಕನ ನೆನಪು ಬಂತು. ಎಷ್ಟೋ ಕಾಲದಿಂದ ಅರಣ್ಯದಲ್ಲಿ ತನ್ನ ಜತೆಯಲ್ಲೇ ಕಷ್ಟಗಳನ್ನನುಭವಿಸಿದ ಸಿದ್ಧಸಾಧಕನು, ತಾನು ಕಾಣದೆಹೋದರೆ ಏನೆಂದುಕೊಳ್ಳುವನು? ತಾನು ಸತ್ತುಹೋದುದಾಗಿ ಭಾವಿಸಿಬಿಡಲಿಕ್ಕಿಲ್ಲವಷ್ಟೆ? ಸ್ವಲ್ಪ ದುಡುಕುಗಾರನಾಗಿದ್ದಾನೆ. ಅಲ್ಲದೆ ಹಂಸರಥದಲ್ಲಿದ್ದ ತನ್ನ ಬಾಲ್ಯಮಿತ್ರ ದೇವಶರ್ಮ, ತಾನು ಕಾಂಚನಮಾಲೆಯನ್ನು ಕಾಪಾಡಲು ಹೋಗಿ ಹುಲಿಯ ಬಾಯಿಗೆ ಬಿದ್ದೆನೆಂದು ಶಂಕಿಸುವ ಸಾಧ್ಯತೆಯೂ ಇದೆ.

ಜಯಶೀಲನು ಇಂತಹ ಆಲೋಚನೆಗಳಲ್ಲಿ ಮುಳುಗಿರುವ ಸಮಯದಲ್ಲಿ ಅಶ್ವೀಕರನಾಯಕನಾದ ವೀರಸೇನನು, ಸಿದ್ಧಸಾಧಕ ಮೊದಲಾದವರನ್ನು ಅರಣ್ಯದಲ್ಲಿರುವ ಕನಕಾಕ್ಷರಾಜರ ಬೀಡಾರಕ್ಕೆ ಕರೆದುಕೊಂಡು ಹೋದನು. ಕನಕಾಕ್ಷ ಮಹಾರಾಜನು ಸಿದ್ಧಸಾಧಕನ ಗುರುತುಹಿಡಿದು, ಆಪ್ಯಾ

ಯತೆಯಿಂದ ಮಾತಾಡಿಸಿ, ಕುಶಲ ವಿಚಾರಿಸುತ್ತ, "ಏನಪ್ಪಾ, ನಿನ್ನ ಜತೆಯಲ್ಲಿ ನಮ್ಮ ಕುಮಾರ ಕುಮಾರಿಯರನ್ನು ಹುಡುಕಲು ಜಯಶೀಲನೆಂಬ ಯುವಕನೂ ಹೊರಟಿದ್ದನಲ್ಲ? ಅವನೆಲ್ಲಿ? ನೀವು ಹೋಗಿ ಬಹಳ ಕಾಲವಾದರೂ ನಿಮ್ಮ ಸುದ್ದಿ ತಿಳಿಯದ್ದರಿಂದ ರಾಜ್ಯವ್ಯವಹಾರವನ್ನು ಮಂತ್ರಿಗಳಿಗೆ ಒಪ್ಪಿಸಿ ನಾನೇ ಸ್ವತಃ ಹೊರಟು ಬಂದು ಈ ಅರಣ್ಯ ದಲ್ಲಿ ಹುಡುಕಾಡಿಕೊಂಡಿದ್ದೇನೆ" ಎಂದನು.

"ಮಹಾರಾಜರೇ, ಬಹಳ ಮಟ್ಟಿಗೆ ಸಮಾಚಾರ ಗೊತ್ತಾಗಿದೆ. ಯುವರಾಜ ಯುವರಾಣಿಯರನ್ನು ಎತ್ತಿಕೊಂಡು ಹೋದವರು ಮಾಯಾ ಸರೋವರ ವೆಂಬಲ್ಲಿ ವಾಸಮಾಡುವ ವಿಚಿತ್ರವಾದ ವಿಜಾತೀಯ ಮನುಷ್ಯರು. ಅವರು ನೀರಿನಲ್ಲಿಯೂ ನೀರಿನ ಹೊರಗೂ ಬದುಕಿರಬಲ್ಲವರು. ಅವರಲ್ಲಿ ಕೆಲವ ರನ್ನು ನಾವು ಹಿಡಿದೆವು. ಅವರ ನಾಯಕನಾದ ಮಾಯಾ ಸರೋವರೇಶ್ವರ ಎಂಬವನು, ಆ ಕಡೆಯಲ್ಲಿ ನರಭಕ್ಷಕಜಾತಿಯವರ ಕೈಗೆ ಸಿಕ್ಕಿ, ತಪ್ಪಿಸಿಕೊಂಡು ಹೋದನು. ಆದರೂ ಕೆಲಸ ಕೆಡಲಿಲ್ಲ. ಅದೇ ಮಾಯಾ ಸರೋವರದಲ್ಲಿ ಮತ್ತೊಂದು ಪ್ರಾಂತ ದಲ್ಲಿ ಬದುಕಿರುವ ಅವರ ಶತ್ರುಗಳಲ್ಲಿ ಒಬ್ಬ ಈಗ ನನ್ನ ಬಂಟನಾಗಿ ಬದಲಾಯಿಸಿದ್ದಾನೆ. ಅವನು ಈ ಜಲವೃಕ ಜಾತಿಯವನು. ದೊಡ್ಡ ಮೊರಟು ವೀರ. ನನ್ನ ದಾಸನಾಗಿದ್ದಾನೆ. ಇವನ ಮೂಲಕ ಆ ಸರೋವರ ಎಲ್ಲಿದೆ ಎಂಬುದನ್ನು ಸುಲಭವಾಗಿ ತಿಳಿದುಬಿಡಬಹುದು" ಎಂದನು ಸಿದ್ಧಸಾಧಕ.

"ಹಾಗೇನು?" ಎಂದು ಕನಕಾಕ್ಷರಾಜನು ಸಿದ್ಧ ಸಾಧಕನ ಹಿಂದೆ ಗದೆಯನ್ನು ಭುಜದ ಮೇಲೆ ಇಟ್ಟು ಕೊಂಡು ನಿಂತಿದ್ದ ಜಲವೃಕರಾಕ್ಷಸನನ್ನು ನೋಡಿ, "ಹಾಗಾದರೆ ಜಯಶೀಲನೆಲ್ಲಿಗೆ ಹೋದನು?" ಎಂದು ಕೇಳಿದನು. "ಅವನು ನನ್ನ ಜತೆಯಲ್ಲೇ ಇದ್ದನು. ಇಬ್ಬರು ಮಾಯಾ ಸರೋವರ ನಿವಾಸಿ



ಗಳೊಂದಿಗೆ ಕೂಡಿ ಹಂಸಗಳ ರಥದಲ್ಲಿ ಅರಣ್ಯ ದಲ್ಲಿ ಬಿದ್ದುಹೋದ ಆ ರಾಜನನ್ನು ಹುಡುಕಾಡು ತ್ತಿದ್ದಾನೆ. ಆ ಕಳ್ಳರಾಜ ನನ್ನ ಕಣ್ಣಿಗೆ ಬಿದ್ದು ತಪ್ಪಿಸಿ ಕೊಂಡಿರುವ ಸಂಗತಿ ಅವನಿಗಿನ್ನೂ ತಿಳಿಯದು. ಎಲ್ಲಿ ಹುಡುಕುತ್ತಿದ್ದಾನೋ ಏನೋ? ನಾನೂ ಅವನನ್ನೇ ಹುಡುಕುತ್ತಿದ್ದೇನೆ." ಎಂದ ಸಿದ್ಧಸಾಧಕ.

"ಹಂಸಗಳ ರಥ? ಅರಣ್ಯದಲ್ಲಿ ಬಿದ್ದವ! ಈ ಜಲವೃಕ ರಾಕ್ಷಸ? ಏನು ವಿಚಿತ್ರ!" ಎಂದು ಕನಕಾಕ್ಷ ರಾಜನೂ ಇತರ ಪರಿವಾರದವರೂ ಎಲ್ಲಿಲ್ಲದ ಆಶ್ಚರ್ಯಕ್ಕೀಡಾದರು.

"ಆಶ್ಚರ್ಯಕ್ಕೆ ಹಂಸರಥ ಮಾತ್ರವಲ್ಲ, ಈ ಜಲ ವೃಕನ ಕಲ್ಲಿನ ಗದೆಯೆಂದರೇನು? ಈ ನರವಾನರ ವೇನು? ಇನ್ನೂ ಮೂರಡಿ ಎತ್ತರ ಕೂಡಾ ಇಲ್ಲದ ಮನುಷ್ಯರೇನು? ಪ್ರಾಣಿಗಳನ್ನು ಹಿಡಿದೆಳೆದು ನುಂಗುವ ಮರಗಳೇನು? ಹೀಗೆ ನಗರದಿಂದ ಅರಣ್ಯ ದಲ್ಲಿ ಪ್ರವೇಶಿಸಿದ ಮೇಲೆ ನಮಗೆ ಇದಿರಾದ ವಿಚಿತ್ರ

ಗಳು ಅನೇಕ ಮಹಾರಾಜರೆ." ಎಂದ ಸಿದ್ಧಸಾಧಕ. ಅಷ್ಟರಲ್ಲಿ ಸ್ವಲ್ಪದೂರದಲ್ಲಿ ಮರಗಳ ಹಿಂದಿನಿಂದ ಏನೋ ಕಲಕಲರವವು ಹೊರಟಿತು. ಅಲ್ಲಿದ್ದ ರಾಜ ಭಟರೊಂದಿಗೆ ಇಬ್ಬರು ನರಭಕ್ಷಕರು ವಾದವಿವಾದ ಮಾಡುತ್ತಿದ್ದರು. ತಮಗೊಂದು ದೊಡ್ಡ ರಹಸ್ಯ ಗೊತ್ತಿದೆಯೆಂದೂ, ನರವಾನರದ ಮೇಲೆ ತಿರುಗುವ ಭೂತರಾಜನೊಂದಿಗೆ ಅದನ್ನು ಹೇಳುತ್ತೇವೆಂದೂ, ಅವನ ಬಳಿಗೆ ಕರೆದೊಯ್ಯಬೇಕೆಂದೂ ಅವರು ಹೇಳುತ್ತಿದ್ದರು.

ಭಟರು ಅವರೊಂದಿಗೆ "ನೀವಾರು? ಎಲ್ಲಿಂದ ಬರುತ್ತೀರಿ? ಮಹಾರಾಜರ ಬಳಿಗೆ ಹಾಗೆಲ್ಲಾ ಬಿಡ ಲಾರೆವು" ಎಂದು ಹೇಳುತ್ತಿದ್ದರು.

ಸಿದ್ಧಸಾಧಕನು ಒಬ್ಬ ರಾಜಭಟನನ್ನು ಕಳುಹಿಸಿ ಸಂಗತಿ ತಿಳಿದುಕೊಂಡು, ಅವರಿಬ್ಬರನ್ನೂ ತನ್ನ ಬಳಿಗೆ ಕರೆತರಲು ಹೇಳಿದನು. ನರಭಕ್ಷಕರಿಬ್ಬರು ಅವನ ಬಳಿಗೆ ಬಂದು ಅಡ್ಡಬಿದ್ದು ಎದ್ದು, "ದೊರೆ ಗಳೇ, ನಮ್ಮ ನಾಯಕರನ್ನೂ, ಪೂಜಾರಿಯವ ರನ್ನೂ ಬಿಡುಗಡೆ ಮಾಡಿದರೆ, ನಿಮಗೊಂದು ದೊಡ್ಡ ರಹಸ್ಯ ಹೇಳುತ್ತೇವೆ" ಎಂದರು.

ಅವರಿಗೇನೋ ಮುಖ್ಯವಾದ ಸಂಗತಿ ಗೊತ್ತಾಗಿರ ಬೇಕೆಂದು ಸಿದ್ಧಸಾಧಕನಿಗೆ ಅನುಮಾನವಾಯಿತು. ಕೂಡಲೇ ಜಲವೃಕ ಬಂಟನನ್ನು ಕರೆದು, ಕುದುರೆಯ ಮೇಲೆ ಬಂಧಿಸಿದ ನರಭಕ್ಷಕರಿಬ್ಬರನ್ನೂ ಬಿಡಿಸಿ ಕರೆ ತರಲು ಹೇಳಿದನು. ಅವನು ಹೋಗಿ ಹೆಬ್ಬುಲಿಹೆಗ್ಗ ನನ್ನೂ, ಮುದುಕ ಪೂಜಾರಿಯನ್ನೂ ಬಿಚ್ಚಿ ಒಂದೊಂದು ಕೈಯಿಂದ ಎತ್ತಿ ತಂದು ಸಿದ್ಧಸಾಧಕನ ಮುಂದೆ ನಿಲ್ಲಿಸಿದನು.

"ಆಯಿತಲ್ಲ. ಈಗ ನಿಮಗೆ ತಿಳಿದ ರಹಸ್ಯವೇನೋ ಹೇಳಿರಿ" ಎಂದ ಸಿದ್ಧಸಾಧಕ.

"ಭೂತಗಳ ದೊರೆಯೇ, ನಿಮ್ಮಿಂದ ಓಡಿಹೋದ ಮೊಸಳೇ ಮುಖದವನನ್ನೂ, ವಿಚಿತ್ರ ಆನೆಯನ್ನೇರಿ ಬಂದವನನ್ನೂ ಹಿಡಿದು ತಿನ್ನಲು ನಾವು ಅರಣ್ಯದಲ್ಲಿ ಹುಡುಕುತ್ತಿರುವಾಗ, ಅವರ ಹತ್ತಿರ ನಿಮ್ಮಂಥ ಮನುಷ್ಯನೊಬ್ಬ, ಇನ್ನೊಬ್ಬಳು 'ಹೆಣ್ಣು' ಕೂಡಾ ಇದ್ದರು. ಆಗ ನಾವು ಅವರನ್ನು ಹಿಡಿದುಕೊಳ್ಳಲು ಹೆದರಿದೆವು. ಹಿಡಿಯಲೋ ಬೇಡವೋ ಅಂತ ಅಡಗಿ ನೋಡುತ್ತಿರುವಾಗ ಆನೆಯವನೂ ಮೊಸಳೆಯವನೂ ಅವರಿಬ್ಬರನ್ನೂ ತಮ್ಮ ವಾಹನಗಳ ಮೇಲೆ ಹತ್ತಿಸಿ ಕೊಂಡು ಗುಡ್ಡಗಳ ಕಡೆಗೆ ಓಡಿದರು. ಇನ್ನೊಂದು ಗುಟ್ಟೇನಂದರೆ, ಹಂಸರಥದಿಂದ ನೆಲಕ್ಕೆ ಇಳಿದ ನಿಮ್ಮಂಥ ಕೆಲವರು ಅದೋ ಆ ಕಡೆ ಪೂರ್ವದಿಕ್ಕಿನಲ್ಲಿ ಕಾಣುವ ಕಾಡಿನ ಹತ್ತಿರ ಯಾವುದನ್ನೋ ಹುಡುಕಾಡಿ ಕೊಂಡಿದ್ದಾರೆ." ಎಂದರು ಆ ನರಭಕ್ಷಕರು.

—(ಇನ್ನೂ ಇದೆ)






ಅಂಜನಾದೇವಿ ತನ್ನ ಮನೆಗೆ ಬಂದವರಿಗೆಲ್ಲಾ ಘನವಾಗಿ ಅತಿಥಿ ಸತ್ಕಾರ ಮಾಡಿದಳು. ಅವಳು ನೀಡಿದ ಔತಣವನ್ನುಂಡು ಎಲ್ಲರೂ ಅಯೋಧ್ಯಾಪುರಿಗೆ ಹಿಂದಿರುಗಿದರು.

ದಾರಿಯಲ್ಲಿ ಸೀತೆ ತನ್ನೊಂದಿಗಿದ್ದ ಯಶೋಧರೆಯೊಂದಿಗೆ, "ಎಲ್ಲಾ ಸಮಸ್ಯೆ ಹೇಗೆ ಬಗೆಹರಿಯಿತು ನೋಡಿದೆಯಾ? ನಾನು ಮೊದಲೇ ನಿನಗೆ ಹೇಳಿದೆ, ನಿನ್ನ ಗಂಡನಿಗೆ ಯಾವ ಭಯವೂ ಇಲ್ಲವೆಂದು. ಕಡೆಗೆ ನಮ್ಮ ಹನುಮಂತನಿಗೆ ಶರಣಾಗತಿ ಹೊಂದಿ ಚರಿತಾರ್ಥನಾದನು." ಎಂದಳು ಆನಂದದಿಂದ.

ಯಶೋಧರೆ ಕೃತಜ್ಞತೆಯಿಂದ ಸೀತೆಯನ್ನು ನೋಡುತ್ತ, "ಅದಕ್ಕೆಲ್ಲವೂ ಮೂಲ ನೀವು ಸೀತಾರಾಮರ ಅನುಗ್ರಹವೇ ಅಲ್ಲವೇನು? ಆಹಾ! ಎಂತಹ ದಿವ್ಯ ದೃಶ್ಯ ನೋಡಿದೆ! ಹನುಮಂತನ ಹೃದಯದಲ್ಲಿ ರಾಮನೊಂದಿಗೆ ನೀವು ಕೂಡಾ ನಮಗೆಲ್ಲಾ ಕಾಣಿಸಿದಿರಿ!" ಎಂದಳು. "ಹೌದು ಹೌದು ಸೀತಮ್ಮಾ, ನಾವೂ ನೋಡಿದೆವು. ಅದೆಲ್ಲಾ ಬಹಳ ಚೆನ್ನಾಗಿತ್ತು!" ಎಂದು ಹೇಳುತ್ತ ಚಂದ್ರಾಂಗದ ಚಂದ್ರಮುಖಿಯರೂ ಆನಂದೋತ್ಸಾಹದಿಂದ ಚಪ್ಪಾಳೆ ತಟ್ಟಿದರು.

ಯಶೋಧರೆ "ಹುಶ್" ಎಂದು ಆ ಮಕ್ಕಳನ್ನು ತಡೆದು, ತನ್ನ ಮಕ್ಕಳನ್ನು ಮಮತೆಯಿಂದ ನೋಡುವ ಸೀತೆಯನ್ನು ನೋಡಿ, "ಅಮ್ಮಾ, ಬೇಗದಲ್ಲೇ ನೀವು ಸಂತಾನವತಿಯಾಗುವಿರಿ. ನಿಮ್ಮ ಮುಖದಲ್ಲಿ ಮಾತೃಕಳೆ ಮಿನುಗುತ್ತಾ ಇದೆ" ಎಂದಳು.

ಸೀತೆ ನಾಚಿಕೆಯಿಂದ ಕೆಂಪಗಾಗಿ ಮುಗುಳು ನಗುತ್ತ ಯಶೋಧರೆಯೊಂದಿಗೆ, "ನೀನು ವಯಸ್ಸಿನಲ್ಲಿ ಚಿಕ್ಕವಳಂತೆ ಕಂಡರೂ ಇಂತಹ ರತ್ನಗಳನ್ನು ಪಡೆದಿರುವ ನೀನು ನನಗಿಂತಲೂ ಹೆಚ್ಚಿನವಳಮ್ಮ. ಅದೃಷ್ಟವಂತೆ ನೀನು. ನಿನ್ನ ಮಾತುಗಳನ್ನು ಆಶೀರ್ವಾದದಂತೆ ಭಾವಿಸುತ್ತೇನೆ." ಎಂದಳು.

ಈ ವಿಧವಾಗಿ ಪಲ್ಲಕಿಯಲ್ಲಿ ಇಷ್ಟಾಗೋಷ್ಠಿ ನಡೆಯಿಸಿಕೊಂಡು ಅಯೋಧ್ಯೆಗೆ ತಲಪಿದರು. ಯಯಾತಿ ಕೆಲವುದಿನ ರಾಮನ ಅತಿಥಿಯಾಗಿ

೪೨. ಅಶ್ವಮೇಧಯಾಗ



ಸಕುಟುಂಬದೊಂದಿಗೆ ಅಲ್ಲಿಯೇ ಇದ್ದನು. ಅವನು ಹಾಗೆ ಅಲ್ಲಿರಲು ಸೀತೆಯ ಕೋರಿಕೆಯೇ ಮುಖ್ಯ ಕಾರಣವಾಗಿತ್ತು. ಅವರು ಇದ್ದಷ್ಟು ದಿನಗಳವರೆಗೆ ಸೀತೆ ಯಶೋಧರೆಯೊಂದಿಗೆ ಉತ್ಸಾಹದಿಂದ ಮಾತುಕತೆಯಾಡುತ್ತ, ಅವಳ ಮಕ್ಕಳೊಂದಿಗೆ ಆಟ ಪಾಟಗಳಲ್ಲಿ ಹೊತ್ತು ಕಳೆಯುತ್ತ ಸಂತೋಷವನ್ನು ಅನುಭವಿಸುತ್ತಿದ್ದಳು.

ಕೆಲವು ದಿನಗಳ ಮೇಲೆ ಯಯಾತಿ ಸೀತಾರಾಮರ ಅಪ್ಪಣೆ ಪಡೆದು, ತನ್ನ ಹೆಂಡತಿ ಮಕ್ಕಳೊಂದಿಗೆ ತನ್ನ ರಾಜ್ಯಕ್ಕೆ ಹೊರಟುಹೋದನು.

ಅನಂತರ ಒಂದು ಹುಣ್ಣಿಮೆಯ ದಿನ ಸಾಯಂಕಾಲದ ಹೊತ್ತಿನಲ್ಲಿ ರಾಮನು ಸೀತೆಯೊಂದಿಗೆ ಅಂತಃಪುರದ ಉದ್ಯಾನದಲ್ಲಿ ವಿಹರಿಸಿಕೊಂಡಿದ್ದನು. ಸೂರ್ಯನು ಮುಳುಗಿ ಚಂದ್ರೋದಯವಾಗಲು ತೊಡಗಿತು. ರಾಮನು ಸೀತೆಯೊಂದಿಗೆ "ಜಾನಕೀ ಅತ್ತನೋಡು!" ಎಂದು ಚಂದ್ರನನ್ನು ತೋರಿಸಿದನು.

ಸೀತೆ ನೋಡುತ್ತ "ಪೂರ್ವದಿಶೆಯೆಂಬ ಕೌಸಲ್ಯಾದೇವಿಗೆ ರಾಮಚಂದ್ರನೆಂಬ ಪುತ್ರನು ಉದಯಿಸುತ್ತಿದ್ದಾನೆ" ಎಂದಳು.

ಕೂಡಲೇ ರಾಮನು, "ಅದು ಹಳೇ ಕತೆ. ಈಗ ಪೂರ್ವದಿಶೆಯೆಂಬ ಸೀತಾದೇವಿಗೂ ಅಂತಹ ಚಂದ್ರೋದಯವೇ ಆಗುತ್ತದೆ. ಇದು ಮೂಡಣ ದಿಕ್ಕು ನನ್ನ ಕಿವಿಯಲ್ಲಿ ಹೇಳುವ ಜೋತಿಷ್ಯ" ಎಂದು ಮುಗುಳು ನಕ್ಕನು.

"ಆ ಚಂದ್ರನು ಈ ರಾಮಚಂದ್ರನ ಹಾಗೆಯೇ ಇರುತ್ತಾನೆಂತಲೂ ಹೇಳುತ್ತದೆ ಅಲ್ಲವೇ?" ಅಂದಳು ಸೀತೆ.

"ಊಹುಂ. ಆ ಚಂದ್ರನು ಜಾನಕೀದೇವಿಯ ಹೋಲಿಕೆಯಲ್ಲೇ ಇರುತ್ತಾನೆಂದು ಹೇಳುತ್ತದೆ" ಎಂದನು ರಾಮ.

ಆಮೇಲೆ ಇಬ್ಬರೂ ಒಬ್ಬರನೊಬ್ಬರು ನೋಡಿ ಆನಂದವಾಗಿ ನೆಗಾಡಿಕೊಂಡರು. ಅವರು ಕುಳಿತುಕೊಂಡಿದ್ದ ಚಂದ್ರಶಿಲಾವೇದಿಕೆಯ ಬಳಿಯಲ್ಲಿದ್ದ ಅಂದವಾದ ಚಿಕ್ಕ ಕೊಳದಲ್ಲಿ ಎರಡು ಕುಮುದ ಕುಸುಮಗಳು ಜೋಡಿಯಾಗಿ ಅರಳಿಕೊಂಡಿದ್ದುವು. ಅವುಗಳನ್ನು ಎಷ್ಟು ನೋಡಿದರೂ ತಣಿವೆ ತೀರದವಳಂತೆ ಸೀತೆ, ಅವುಗಳನ್ನೇ ತಿರುತಿರುಗಿ ನೋಡುತ್ತಾ ರಾಮನ ಜತೆಯಲ್ಲಿ ಅಂತಃಪುರಕ್ಕೆ ಹೋದಳು.

ಸ್ವಲ್ಪ ರಾತ್ರಿ ಕಳೆದ ಮೇಲೆ ಸೀತೆ ಒಂದುಸಾರಿ ಉಪ್ಪರಿಗೆಯಲ್ಲಿ ಹೊರಗೆ ಬಂದು, ಉದ್ಯಾನವನದ ಕೊಳದಕಡೆಗೆ ದೃಷ್ಟಿ ಹಾಯಿಸಿದಳು. ಆ ಕೊಳದ ಜತೆ ಕುಮುದಗಳು ಬೆಳುದಿಂಗಳಲ್ಲಿ ಜಗಜಗನೆ ಹೊಳೆಯುತ್ತಿದ್ದುವು. ರಾಮನು ಬಂದು ಕರೆಯುವವರೆಗೂ ಅವಳು ಅಲ್ಲಿಂದ ಕದಲಲಿಲ್ಲ.

* * *

ಹನುಮಂತನು ಗಂಧಮಾದನ ಪರ್ವತದ ಮೇಲೆ ಜಪತಪ ಧ್ಯಾನಗಳಿಂದ ದಿನಗಳನ್ನು ಕಳೆಯುತ್ತಿರಲು

ಎಷ್ಟುಕಾಲ ಉರುಳಿತೆಂಬ ಪರಿವೆಯಿಲ್ಲದೆ ಅನೇಕ ವರ್ಷಗಳನ್ನು ಕಳೆದುಬಿಟ್ಟನು. ಹೃದಯದಲ್ಲಿ ಸೀತಾ ರಾಮರನ್ನಿರಿಸಿ ಕೊಂಡವನಿಗೆ ಗಂಧಮಾದನ ಪರ್ವತವು ಅಯೋಧ್ಯೆಯಂತಾಗಿದ್ದರೆ ಆಶ್ಚರ್ಯ ವೇನಿಲ್ಲ. ಆಗ ಅಯೋಧ್ಯೆಯಿಂದ ಮುಖ್ಯನಾದವ ನೊಬ್ಬ ಹನುಮಂತನಬಳಿಗೆ ಬಂದನು. ಅವನು ರಾಮನ ಅಂತರಂಗಿಕನೂ, ವಯೋವೃದ್ಧನೂ ಆದ ಭದ್ರನೆಂಬವನೇ. ರಾಮನ ಅಜ್ಞನಂತಹವನು. ರಾಮನ ಅಭಿಪ್ರಾಯದಂತೆ ಅವನು ಹನುಮಂತ ನನ್ನು ಕರೆಯಲು ಬಂದಿದ್ದನು.

"ರಾಮನು ನಿನ್ನನ್ನು ಬರಲಿಕ್ಕೆ ಹೇಳಿದ್ದಾನೆ" ಎಂದು ಭದ್ರನು ಹೇಳಿದುದನ್ನು ಕೇಳಿ ಹನುಮಂತನು ಭದ್ರನ ಮುಖವನ್ನು ನೋಡಿದನು. ಭದ್ರನು ಬಹಳ ಚಿಂತೆಯಲ್ಲಿರುವಂತೆ ಕಂಡಿತು. "ಏನು ನಡೆಯಿತು ಭದ್ರಯ್ಯಾ? ನಿನ್ನಂಥವನನ್ನು ರಾಮನು ಕಳುಹಿಸಿದ ನೆಂದರೆ ಏನೋ ವಿಶೇಷವಿರಬೇಕ್ಟೆ?" ಎಂದು ಹನುಮಂತನು ಪ್ರಶ್ನಿಸಿದನು.

ಭದ್ರನು ಬಿಸಿಯಾದೊಂದು ನಿಟ್ಟುಸಿರುಬಿಟ್ಟು, "ಆಗಿಹೋಯಿತು! ಎಲ್ಲಾ ಮುಗಿದುಹೋಯಿ ತಪ್ಪಾ, ಹನುಮಂತಾ!" ಎಂದನು.

"ಏನು ಹೇಳುವೆ? ವಿವರವಾಗಿ ಹೇಳು" ಎಂದ ಹನುಮಂತ. "ಸಂಕ್ಷೇಪವಾಗಿ ಹೇಳುತ್ತೇನೆ. ವಿವರ ವಾಗಿ ಹೇಳಲಿಕ್ಕೆ ಏನೂ ಇಲ್ಲ." ಎಂದು ಭದ್ರನು ಅಲ್ಲಿ ನಡೆದ ಸಮಾಚಾರಗಳನ್ನೆಲ್ಲಾ ಹೇಳಿದನು.

ಅದೇನೆಂದರೆ, ಒಂದು ದಿನ ಋಷಿಗಳ ಗುಂಪೊಂದು ರಾಮನಬಳಿಗೆ ಬಂದಿತು. ಅವರೊಂದಿಗೆ ಬ್ರಾಹ್ಮಣರ ಗುಂಪು ಸಹಾ ಸೇರಿತ್ತು.

ಶಂಬುಕನೆಂಬ ಶೂದ್ರನೊಬ್ಬ ವೇದಾಧ್ಯಯನ ಮಾಡಿ ತಪಸ್ಸಿನಲ್ಲಿರುವ ಕಾರಣದಿಂದ ಧರ್ಮಕ್ಕೆ ಹಾನಿಯಾಯಿತೆಂದೂ, ಅದರಿಂದ ತಮ್ಮ ಹುಡುಗ ನೊಬ್ಬ ಅಕಾಲಮರಣಕ್ಕೆ ತುತ್ತಾದನೆಂದೂ, ಕೂಡಲೇ



ಆ ಶಂಬುಕನನ್ನು ವಧಿಸಬೇಕೆಂದೂ ಅವರು ರಾಮನಿಗೆ ಆಜ್ಞಾಪಿಸುವ ಧೋರಣೆಯಲ್ಲಿ ಹೇಳಿದರು.

ಎಲ್ಲಾ ವರ್ಗದ ಜನರನ್ನೂ ಸಂತೃಪ್ತಿಪಡಿಸುತ್ತ ರಾಜ್ಯವಾಳಬೇಕೆಂದು ದೀಕ್ಷೆ ಹಿಡಿದವನಾದ ರಾಮನು, ಆ ಕೂಡಲೇ ಶಂಬುಕನ ಕಡೆಗೆ ಹೋದನು. ಸಾಧು ಜೀವನ ನಡೆಸುತ್ತ ತಲೆಕೆಳಗಾಗಿ ತಪಸ್ಸಿನಲ್ಲಿ ಮಗ್ನ ನಾಗಿದ್ದ ಶಂಬುಕನನ್ನು ಖಡ್ಗದ ಒಂದೇಟಿಗೇ ಕಡಿದು ಹಾಕಿದನು. ಆಗ ಶಂಬುಕನ ಹೆಂಡತಿ ರಾಮನನ್ನು ನೋಡಿ, "ಓ ಮಹಾರಾಜನೇ, ನಿನಗೆ ಏನೋ ಅನರ್ಥವು ಕಾದಿರುವುದೆಂಬುದಕ್ಕೆ ಸೂಚನೆಯಾಗಿ ಈ ಕೃತ್ಯ ನಡೆಸಿರುವೆ. ಯಾವುದಕ್ಕೂ ಎಚ್ಚರಿಕೆ ಯಿಂದಿರಯ್ಯಾ!" ಎಂದು ಹೇಳಿ ಅಗ್ನಿಪ್ರವೇಶ ಮಾಡಿ ಪ್ರಾಣಬಿಟ್ಟಳು.

ಈ ಘಟನೆ ನಡೆದ ಕೆಲವು ದಿನಗಳ ಮೇಲೆ ಒಂದು ದಿನ ರಾತ್ರಿ ರಾಮನು ಭದ್ರನನ್ನು ಕರೆದು ಕೊಂಡು ವೇಷ ಬದಲಾಯಿಸಿಕೊಂಡು ಗಸ್ತುತಿರು



ಗುತ್ತಾ ಹೊರಟನು. ಇಬ್ಬರೂ ಅಯೋಧ್ಯೆಯ ಕೊನೆ ಭಾಗದಲ್ಲಿರುವ ಅಗಸರಕೇರಿಯ ಬಳಿಗೆ ತಲಪಿದರು. ಅಲ್ಲಿ ಒಂದು ಮನೆಯ ಹತ್ತಿರ ಗಂಡ ಹೆಂಡಿರೊಳಗೆ ಏನೋ ಜಗಳ ನಡೆಯುತ್ತಿದ್ದಿತು. ಇಬ್ಬರೂ ಕೇಳುತ್ತಾ ನಿಂತರು.

ಎಲ್ಲಿಗೋ ಹೋಗಿ ಕೆಲವಾರು ದಿನಗಳ ಮೇಲೆ ಹಿಂದಿರುಗಿ ಬಂದ ಹೆಂಡತಿಯನ್ನು ಒಬ್ಬ ಅಗಸನು ಹೊಡೆದುಬಡೆದು ಆಟಾಟಾಯಿಸುತ್ತಿದ್ದನು. ಹೆಂಡತಿ ಮನೆಬಾಗಿಲು ಮೆಟ್ಟದಂತೆ ಬೈಯುತ್ತ ತಡೆಯುತ್ತಿದ್ದನು. ಅವನ ಹೆಂಡತಿ ರಕ್ತ ಒಸರುವ ಬೆನ್ನನ್ನು ಇತರರಿಗೆ ತೋರಿಸುತ್ತ, ಬಿಕ್ಕಿಬಿಕ್ಕಿ ಅಳುತ್ತ, "ಆ ಸೀತಮ್ಮನನ್ನು ರಾಮನಂಥಾ ಮಹಾರಾಜನೇ ಮನೆಯೊಳಗೆ ತಂದು ಕೊಂಡಾಟ ಮಾಡಿರುವಾಗ ನೀನೊಬ್ಬ ಅವನಿಗಿಂತ ಹೆಚ್ಚಿನವನಾ?..." ಎಂದಳು. ಕುತ್ತಿಗೆ ಮಟಕುಡಿದು ಓಲಾಡುತ್ತಿದ್ದ ಅಗಸ ಕೆಂಗಣ್ಣು ತಿರುಗಿಸುತ್ತ, ಕತ್ತೆಯ ಕೂಗಿನಂತೆ, "ಅವನೊಬ್ಬ ಮಹಾರಾಜ, ಹೇಳುವವರಾರು ಕೇಳುವವರಾರು? ಅಷ್ಟುಕಾಲ ಲಂಕೇಲಿ ಯಾವನೊಂದಿಗೋ ಇದ್ದವಳನ್ನು ತಂದು ನಾಚಿಕೆಯಿಲ್ಲದೆ ಕುಲುಕುವ ಹಾಗೆ, ನಾನೊಬ್ಬ ಹುಚ್ಚುರಾಮಾ ಅಂತ ಮಾಡಿದಿಯೇನೇ?" ಎಂದು ಎಲ್ಲರ ಮುಂದೂ ಕೂಗಿದನು.

ಇಂತಹ ಕರ್ಣಕರ್ಕಶ ಮಾತುಗಳನ್ನು ಕೇಳಿದ ಪರಿಣಾಮವಾಗಿ ರಾಮನು ಸೀತೆಯನ್ನು ಅರಣ್ಯಕ್ಕೆ ಒಯ್ದು ಬಿಟ್ಟುಬರುವಂತೆ ಲಕ್ಷ್ಮಣನಿಗೆ ಆಜ್ಞೆಮಾಡಿದನು. ಆಗ ಸೀತೆ ತುಂಬು ಗರ್ಭಿಣಿ. ಅದರ ಮುಂಚಿನ ದಿನವೇ ಸೀತೆ ರಾಮನೊಂದಿಗೆ ತನಗೆ ಋಷ್ಯಾಶ್ರಮಗಳಿಗೆ ಹೋಗಿ ಮುನಿಪತ್ನಿಯರೊಂದಿಗೆ ಮಾತುಕತೆಯಾಡಬೇಕೆಂದು ಕೋರಿಕೊಂಡಿದ್ದಳು. ಆ ನೆವನದಿಂದಲೇ ಲಕ್ಷ್ಮಣನು ಸೀತೆಯನ್ನು ರಥದಲ್ಲಿ ಕೂಡಿಸಿ ಅರಣ್ಯದಲ್ಲಿ ಬಿಟ್ಟು ಹಿಂದಿರುಗಿಬಿಟ್ಟನು.

ಸೀತೆಯನ್ನು ತ್ಯಜಿಸಿದ ರಾಮನು ಸಂತೋಷವನ್ನೆಲ್ಲಾ ಕಳೆದು, ನಿದ್ರಾಹಾರಗಳನ್ನು ಬಿಟ್ಟು ಕುಂದಿ ಕೊರಗಿಹೋಗುವುದನ್ನು ಭದ್ರನಿಂದ ನೋಡಲಾಗಲಿಲ್ಲ. ಭದ್ರನು ಚಿಕ್ಕಂದಿನಿಂದಲೇ ರಾಮನನ್ನು ಎತ್ತಿ, ತಿರುಗಿಸಿ, ಲಾಲಿಸಿ, ಆಡಿಸಿ ಬೆಳೆಸಿದವನು. ಮಗುವಾಗಿದ್ದ ರಾಮನು ಆಕಾಶದ ಚಂದ್ರನನ್ನು ನೋಡಿ ತಾ ತಾ ಎಂದು ಹಟಮಾಡಿದಾಗ ಭದ್ರನು ಕನ್ನಡಿಯನ್ನು ತಂದು ಚಂದ್ರನನ್ನು ತೋರಿಸಿದನು. ಅದರಲ್ಲಿ ತನ್ನ ಮುಖವನ್ನೂ ಚಂದ್ರನನ್ನೂ ನೋಡಿ ರಾಮನು ಮುದ್ದುಮುದ್ದಾಗಿ "ರಾಮ-ಚಂದ್ರ" ಎಂದು ತೊದಲ್ನುಡಿಯಲು, ಭದ್ರನು ರಾಮನ ಪಕ್ಕದಲ್ಲಿ ತನ್ನ ಮುಖವನ್ನಿಟ್ಟು "ಈಗಲೋ?" ಎಂದನು. "ರಾಮ-ಭದ್ರ" ಎಂದು ಮತ್ತಷ್ಟು ಮುದ್ದಾಗಿ ಹೇಳಿದ ರಾಮ. ಆಗಿನಿಂದಲೂ ರಾಮನಿಗೆ ರಾಮಚಂದ್ರ, ರಾಮಭದ್ರ ಎಂಬ ಹೆಸರುಗಳು ಬಂದಿದ್ದುವು. ರಾಮನೊಂದಿಗೆ ಅಂತಹ ಅನುಬಂಧಗಳಿರುವ ಭದ್ರನಿಗೆ, ಆ ಹುಚ್ಚ ಅಗಸನನ್ನು ಹಿಡಿದು



42-4

ಚಿತ್ರವಧೆ ಮಾಡಬೇಕೆಂದು ತೋರಿ ಅಗಸರಕೇರಿಗೆ ಹೋಗಿ ಹುಡುಕತೊಡಗಿದನು.

"ಅವನು ಅಂಥಾ ಕೆಟ್ಟಮಾತು ಆಡಿದ್ದಕ್ಕೆ ಅಲ್ಲಿದ್ದವರೆಲ್ಲಾ ಅವನನ್ನು ಹಿಡಿದು ಒಗೆದು ಹಿಂಡಿಹಾಕಲು ನೋಡಿದರು. ಯಾರಿಗೂ ಸಿಕ್ಕದೆ ಅವನು ಓಡಿ ಹೋದ. ಅವನ ಹೆಂಡತಿಯೂ ಕಾಣುವುದಿಲ್ಲ" ಎಂದು ಅಲ್ಲಿದ್ದವರು ಭದ್ರನೊಂದಿಗೆ ಹೇಳಿದರು.

ಲಕ್ಷ್ಮಣನು ಸೀತೆಯನ್ನು ಕಾಡಿನೊಳಗೆ ಅನಾಥೆಯನ್ನಾಗಿ ಮಾಡಿ ಹಿಂದಿರುಗಿದ ಮೇಲೆ, ಅವಳು ದೊಡ್ಡ ಬಂಡೆಯ ಮೇಲಿನಿಂದ ನದೀಪ್ರವಾಹಕ್ಕೆ ಹಾರಿಕೊಳ್ಳಲು ಪ್ರಯತ್ನಿಸುವಾಗ, ವಾಲ್ಮೀಕಿ ಮಹಾಮುನಿ ಅವಳನ್ನು ತಡೆದು ತನ್ನಾಶ್ರಮಕ್ಕೆ ಕರೆದು ಕೊಂಡು ಹೋದನು. ಅಲ್ಲಿ ಸೀತೆ ಇಬ್ಬರು ಗಂಡು ಮಕ್ಕಳನ್ನು ಹಡೆದಳು. ಅವಳಿಜವಳಿಗಳಾಗಿ ಹುಟ್ಟಿದ ಆ ಮಕ್ಕಳಿಗೆ, ವಾಲ್ಮೀಕಿ ಕುಶ ಮತ್ತು ಲವ ಎಂದು ಹೆಸರಿಟ್ಟು, ಸಕಲ ವಿದ್ಯಾಬುದ್ಧಿಗಳನ್ನೂ ಕಲಿಸಿದನು. ವಿಶೇಷವಾಗಿ ತಾನು ರಚಿಸಿದ ರಾಮಾಯಣ ಕಥೆಯನ್ನು ಗಾನಮಾಡುವ ಪದ್ಧತಿಯನ್ನೂ ಅವರಿಗೆ ಕಲಿಸಿದನು. ಆ ಹುಡುಗರಿಗೆ ಬಿಲ್ಲು ವಿದ್ಯೆಗಳನ್ನು ಕಲಿಸಿಕೊಟ್ಟವಳು ಸೀತೆಯೇ.

ಒಂದು ದಿನ ಕುಶಲವರು ರಾಮಾಯಣದಲ್ಲಿ ಬರುವ ರಾಮನು ಹೇಗಿರುವನೋ, ತಮ್ಮ ತಾಯಿಯ ಹೆಸರೇ ಇರುವ ರಾಮನ ಹೆಂಡತಿ ಹೇಗಿರುವಳೋ ನೋಡಬೇಕೆಂದು, ರಾಮ ಕಥೆಯನ್ನು ಹಾಡುತ್ತಾ ಅಯೋಧ್ಯೆಗೆ ಹೋದರು.

ರಾಮನು ಸೀತೆಯ ಧ್ಯಾನದಲ್ಲೇ ಕೃಶನಾಗುವುದನ್ನು ನೋಡಿ, ಅದನ್ನು ಸ್ವಲ್ಪವಾದರೂ ಉಪಶಮನವಾಗುವಂತೆ ಮಾಡುವುದು ಹೇಗೆಂದು ವಸಿಷ್ಠ ಮೊದಲಾದ ಹಿರಿಯರು ಆಲೋಚನೆ ಮಾಡಿದರು. ರಘು ವಂಶದ ರಾಜಪರಂಪರೆಯವರು ಮಾಡಿದಂತೆ, ಲೋಕಕಲ್ಯಾಣದ ನಿಮಿತ್ತವಾಗಿ ಅಶ್ವಮೇಧ ಯಾಗ



ವನ್ನು ಮಾಡುವುದು ಒಳ್ಳೆಯದೆಂದು ನಿರ್ಣಯಿಸಿ ರಾಮನಿಗೂ ಆದೇಶ ಮಾಡಿದರು. ಅದಕ್ಕಾಗಿ ಬಂಗಾರದಿಂದ ಮಾಡಿದ ಸೀತೆಯ ವಿಗ್ರಹವನ್ನು ಪಕ್ಕದಲ್ಲಿಟ್ಟುಕೊಳ್ಳುವುದು ಶಾಸ್ತ್ರಸಮ್ಮತವಾದುದೆಂದೂ ಹೇಳಿದರು. ರಾಮನು ಗುರುಹಿರಿಯರ ಆದೇಶದಂತೆ, ಸೀತೆಯ ಸ್ವರ್ಣವಿಗ್ರಹ ಮಾಡಿಸಿ ಪಕ್ಕದಲ್ಲಿಟ್ಟುಕೊಂಡು ಅಶ್ವಮೇಧ ಯಾಗವನ್ನು ಪ್ರಾರಂಭಿಸಿದನು. ಅದೇ ದಿನ ಮುನಿಬಾಲಕರೆಂದು ಹೇಳಿಕೊಳ್ಳುತ್ತ ಕುಶಲವರು ರಾಮಾಯಣವನ್ನು ಗಾನ ಮಾಡಿಕೊಂಡು ನಗರದ ಬೀದಿಗಳಲ್ಲಿ ತಿರುಗಾಡುತ್ತಿದ್ದರು. ಲಕ್ಷ್ಮಣನು ಅವರನ್ನು ನೋಡಿ, ಅವರು ಯಾರಾಗಿರಬಹುದೆಂಬುದನ್ನು ಊಹಿಸಿ ರಾಜಮಂದಿರಕ್ಕೆ ಕರೆದುಕೊಂಡು ಹೋದನು.

ರಾಜಪ್ರಾಸಾದಕ್ಕೆ ಹೋದ ಕುಶಲವರು ರಾಮಾಯಣದಲ್ಲಿಯ ಸೀತೆ ಅಗ್ನಿ ಪ್ರವೇಶ ಮಾಡಿದ ಘಟ್ಟವನ್ನು ಕಣ್ಣಿಗೆ ಕಟ್ಟುವ ಹಾಗೆ ಹಾಡುವಾಗ ಕೇಳುವವ



42-5



ರೆಲ್ಲಾ ಚಿತ್ರದ ಬೊಂಬೆಗಳಂತಾದರು. ಅಲ್ಲದೆ ಕೌಸಲ್ಯೆ ಮೊದಲಾದ ಅಂತಃಪುರ ಸ್ತ್ರೀಯರು, ಯಾಗ ಮಾಡಿಸುತ್ತಿದ್ದ ಹಿರಿಯರು, ರಾಜಪರಿವಾರದವರು, ಪುರಪ್ರಮುಖರು ಮೊದಲಾದವರೆಲ್ಲಾ ಕಣ್ಣೀರು ಸುರಿಸುತ್ತಾ ಸ್ವರ್ಣಸೀತೆಯನ್ನು ನೋಡಿ ಕೈಗಳನ್ನು ಜೋಡಿಸಿ ಕಣ್ಣೊತ್ತಿಗೊಂಡರು. ರಾಮನು ಕುಶ ಲವರು ಮುನಿಬಾಲಕರೇ ಎಂದುಕೊಂಡು, ತನಗೆ ತಿಳಿಯದಂತೆಯೇ ಅವರನ್ನು ಬರಸೆಳೆದು ಮುದ್ದಾಡಿ ಅನೇಕ ಕಾಣಿಕೆಗಳನ್ನೂ ಚೀನಾಂಬರಗಳನ್ನೂ ಕೊಟ್ಟು ಸತ್ಕರಿಸಿ ಕಳುಹಿಸಿ ಕೊಟ್ಟನು.

ಅಶ್ವಮೇಧ ಯಾಗದ ಪ್ರಾರಂಭ ಕ್ರಿಯೆಗಳೆಲ್ಲಾ ಮುಗಿದ ಮೇಲೆ ರಘುವಂಶದ ಕುರುಹಾದ ಸೂರ್ಯ ಪತಾಕೆಯನ್ನು ಅಳವಡಿಸಿ ಅಲಂಕರಿಸಲ್ಪಟ್ಟ ಯಾಗಾಶ್ವವನ್ನು, ಸ್ವೇಚ್ಛೆಯಾಗಿ ಸ್ವೈರವಿಹಾರಕ್ಕೆ ಬಿಡಲಾಯಿತು. ಆ ಕುದುರೆ ಉತ್ಸಾಹದಿಂದ ಪುಟಿದು ನಾಗಾಲೋಟದಿಂದ ಹೋಗಿ ಹೋಗಿ ನೆಟ್ಟಗೆ ವಾಲ್ಮೀಕಿಯ ಆಶ್ರಮದ ಹತ್ತಿರ ಹೋಯಿತು. ಕುದುರೆಯ ನೊಸಲಿನಲ್ಲಿರುವ ಬಂಗಾರದ ಬಾಸಿಂಗದಲ್ಲಿ ಕಾಣುವ ಅಕ್ಷರಗಳನ್ನು ಕುಶಲವರು ಓದಿದರು. ಅದು ಯಾಗಾಶ್ವವೆಂದು ತಿಳಿದು ಕೂಡಲೇ ಅದನ್ನು ಎಳೆದುಕೊಂಡು ಹೋಗಿ ಕಟ್ಟಿಹಾಕಿದರು.

ಕುದುರೆಯನ್ನು ಬಿಡಿಸಿಕೊಳ್ಳಲು ಹೋದ ಭರತ, ಲಕ್ಷ್ಮಣ, ಶತ್ರುಘ್ನರು ಕುಶಲವರೊಂದಿಗೆ ಯುದ್ಧ ಮಾಡಿ ಸೋತು ಮೂರ್ಛೆ ಬಿದ್ದರು. ಈ ಸಮಾಚಾರ ತಿಳಿದು ಸ್ವತಃ ರಾಮನೇ ಹೊರಟು ಬಂದು ಕುಶಲವರೊಂದಿಗೆ ಯುದ್ಧ ಮಾಡಿದನು.

ಕುಶಲವರು ತಮ್ಮ ತಾಯಿ "ಮಹಾಸಾಧ್ವಿ ನಿಜವಾದರೆ" ಎಂಬ ಪ್ರತಿಜ್ಞೆ ಉಚ್ಚರಿಸಿಕೊಂಡು ಪ್ರಯೋಗಿಸಿದ ಬಾಣಗಳಿಂದ ರಾಮನೂ ಮೂರ್ಛಿತನಾಗಿ ಬಿದ್ದನು. ಅದನ್ನು ತಿಳಿದು ಸೀತೆ ಓಡಿ ಬಂದು ರಾಮನ ಪಾದಗಳನ್ನು ಹಿಡಿದು ಉಪಚರಿಸಿ ಅವನಿಗೆ ಎಚ್ಚರಿಕೆ ಬರಿಸಿದಳು. ಆಗ ವಾಲ್ಮೀಕಿ ಮುನಿ ಅಲ್ಲಿಗೆ ಬಂದು, ಸೀತೆ ಪತಿವ್ರತೆ ಎಂದೂ, ಅವಳನ್ನು ಸ್ವೀಕರಿಸಿ ಕರೆದೊಯ್ಯುವುದು ಒಳ್ಳೆಯದೆಂದೂ ರಾಮನಿಗೆ ಹೇಳಿದನು. ಅದಕ್ಕೆ ರಾಮನು, ಆ ವಿಧವಾಗಿ ಸೀತೆ ಶಪಥ ಮಾಡಿ, ಅಯೋಧ್ಯೆಯ ಪೌರರೆಲ್ಲರನ್ನೂ ಮೆಚ್ಚಿಸುವಂತೆ ಮಾಡಿದರೆ ತುಂಬಾ ಒಳ್ಳೆಯದೆಂದು ಪ್ರತ್ಯುತ್ತರ ಹೇಳಿದನು.

ಸೀತೆ ರಾಮನ ಹಿಂದೆ ಅಯೋಧ್ಯೆಗೆ ಬಂದು, ಕುಮಾರರನ್ನು ರಾಮನಿಗೆ ಒಪ್ಪಿಸಿ, "ನನ್ನ ಪವಿತ್ರತೆಗೆ ನಿದರ್ಶನವಾಗಿ ಭೂದೇವಿ ನನ್ನನ್ನು ಸ್ವೀಕರಿಸಲಿ!" ಎಂದಳು. ಮರುಕ್ಷಣದಲ್ಲಿ ಭೂಮಿ ಕಂಪಿಸಿತು. ದಿಕ್ಕುಗಳಲ್ಲಿ ಧೂಳೆದ್ದು ಕತ್ತಲೆ ಕವಿಯಿತು. ಮಿಂಚುಗಳು ಮಿಂಚಿದುವು. ಸಿಡಿಲುಗಳು ಮೊಳಗಿದುವು. ಅಯೋಧ್ಯೆಯ ಪುರವಾಸಿಗಳು ಮನೆಯೊಳಗಿನಿಂದ ಹೊರಗೆ ಬಂದು ಕೋಲಾಹಲವಾಗಿ ಓಡಾಡುತ್ತ, ಸೀತೆ ಇರುವ ಸ್ಥಳಕ್ಕೆ ಬಂದು ಗುಂಪುಗೂಡಿದರು.

ಆಗ ಸೀತೆ ನಿಂತಿದ್ದ ಸ್ಥಳದಲ್ಲಿ ಭೂಮಿ ಬಾಯಿ ಬಿಟ್ಟಿತು. ಅದರೊಳಗಿನಿಂದ ಮಣಿಮಯವಾದ ಸಿಂಹಾಸನದ ಮೇಲೆ ಮಂಡಿಸಿದ್ದ ಭೂದೇವಿ ಪ್ರತ್ಯಕ್ಷ ಎದ್ದು ಬಂದಳು. ಆ ಸಿಂಹಾಸನವನ್ನು ನಾಗಕಾಂತೆಯರು ಹೊತ್ತುಕೊಂಡಿದ್ದರು. ಭೂದೇವಿ ಸಿಂಹಾಸನದಿಂದಿಳಿದು ತಾಯಿ ಮಗುವನ್ನು ಎತ್ತಿಕೊಳ್ಳುವಂತೆ ಎರಡು ಕೈಗಳಿಂದಲೂ ಸೀತೆಯನ್ನು ಎತ್ತಿಕೊಂಡು, ತನ್ನ ಮಡಿಲ ಮೇಲೆ ಕೂಡಿಸಿಕೊಂಡಳು. ಆ ಕೂಡಲೇ ಭೂಮಿ ಮತ್ತೆ ಕಂಪಿಸಿತು. ಅಯೋಧ್ಯಾ ನಗರವು ಮತ್ತೆ ಓಲಾಡಿತು. ಆದರೆ ಒಂದೇ ಒಂದು ಮನೆಯ ಮಾಡಿನ ಮೂಲೆ ಕೂಡಾ ಕುಸಿಯಲಿಲ್ಲ; ಗೋಡೆಗಳು ಸೀಳಲಿಲ್ಲ. ಸೀತೆಯೊಂದಿಗೆ ಭೂದೇವಿ ಭೂಮಿಯೊಳಗೆ ಹೊರಟುಹೋದಳು. ಭೂಮಿ ಸೀಳಿದ ಗುರುತು ಸಹಾ ಇಲ್ಲದಂತೆ ಮೊದಲಿದ್ದಂತೆ ನಯವಾಗಿ ಮುಚ್ಚಿಕೊಂಡುಹೋಗಿತ್ತು.

ಸ್ತಂಭಿಸಿ ನಿಂತಿದ್ದ ರಾಮನು ಎಚ್ಚರಕ್ಕೆ ಬಂದ ಮೇಲೆ ಭೂಮಿಯನ್ನು ಸೀಳುತ್ತೇನೆಂದು ತನ್ನ ಕೋದಂಡವನ್ನೆತ್ತಿ ಬಾಣವನ್ನು ಸಂಧಿಸಲು ನೋಡಿದನು. ಅಷ್ಟರಲ್ಲಿ ಆಕಾಶದಿಂದ, "ರಾಮಾ! ರಘುವಂಶದ ರಾಜರೆಲ್ಲರೂ ಭೂಮಿಯನ್ನು ತಣ್ಣಗೆ ಪಾಲಿಸಿಕೊಂಡವರಾಗಿರುವಾಗ, ನೀನು ಭೂಮಿಯನ್ನು ಸೀಳುವೆಯಾ? ಕೈಯಾರೆ ಬಾಯಾರೆ ನೀನೇ ಶಪಥ ಮಾಡಿಸಿ ಸೀತೆಯನ್ನು ಅವಳ ತೌರುಮನೆಗೆ ಕಳುಹಿಸಿದೆಯಲ್ಲಾ? ಇನ್ನೇಕೆ ಈ ದುರಾಶೆ?" ಎಂದು ಅಶರೀರವಾಣಿ ಗಂಭೀರ ಧ್ವನಿಯಿಂದ ಮೊಳಗಿತು. ರಾಮನು ಧನುಸ್ಸನ್ನು ಕೆಳಗಿಳಿಸಿದನು.

ಕಡೆಗೆ ರಾಮನು ಕುಶಲವರಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಿ ಸಿಂಹಾಸನದ ಮೇಲೆ ಕೂಡಿಸಿ, ತಾನು ವಿಷಾದವೇ ಮೂರ್ತಿವೆತ್ತವನಂತೆ ಆಗಿಬಿಟ್ಟನು.

"ಹನುಮಂತಾ, ಇದಿಷ್ಟು ಈ ಮಧ್ಯ ಕಾಲದಲ್ಲಿ ಅಯೋಧ್ಯೆಯಲ್ಲಿ ನಡೆದ ಕಥೆ. ಈಗ ಅಶ್ವಮೇಧ ಯಾಗವು ನಡೆಯುತ್ತಾ ಇದೆ. ಯಾಗಾಶ್ವವು ಉತ್ತರದಿಂದ ಪೂರ್ವ ದಿಕ್ಕಿಗೆ ತಿರುಗಿ ಹೋಗುತ್ತಿದೆ. ಭರತ ಲಕ್ಷ್ಮಣ ಶತ್ರುಘ್ನರು ಸೈನ್ಯದೊಂದಿಗೆ ಅದರ ಹಿಂದೆ ಹೋಗುತ್ತಿದ್ದಾರೆ." ಎಂದು ಭದ್ರನು ಹೇಳುವುದನ್ನು ಮುಗಿಸಿ, ನಿಟ್ಟುಸಿರುಬಿಟ್ಟನು.

ಶಿಲಾ ಪ್ರತಿಮೆಯಂತೆ ಕಣ್ಣೀರಿಳಿಸುತ್ತ ಎಲ್ಲವನ್ನೂ ಕೇಳಿದ ಹನುಮಂತನು, ಕಣ್ಣುಗಳನ್ನು ಒತ್ತಿಕೊಂಡು ಎದ್ದು, "ಭದ್ರಾ, ನಾನು ಈಗಲೇ ರಾಮನ ಬಳಿಗೆ ಹೋಗುತ್ತೇನೆ. ನೀನು ಹಿಂದಿನಿಂದ ನಿಧಾನವಾಗಿ ಬಾ" ಎಂದು ಹೇಳಿ, ತನ್ನ ಗದೆಯನ್ನು ಹೆಗಲಿಗೇರಿಸಿಕೊಂಡು ಆಕಾಶಕ್ಕೆ ಉಡ್ಡಾಣ ಮಾಡಿ ಅಯೋಧ್ಯೆಯ ಕಡೆಗೆ ಹೋದನು.

